# ಅಚಲ

ತಿಂಗಳ ಪತ್ರಿಕೆ

ನವೆಂಬರ್ - 2003

18

## ಒಳಗೇನಿದೆ







ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 18 ಸಂಚಿಕೆ : 11

ಸಂಪಾದಕ ಮಂಡಲಿ
ಎನ್. ಗಾಯತ್ರಿ
ನೇಮಿಚಂದ್ರ, ದೇವಿ,
ಶಾಂತಾನಾಗರಾಜ್
ಹೆಚ್. ಎನ್: ಗೀತಾ
ಹೇಮಲತಾ ಮಹಿಷಿ

ಪ್ರಕಾಶಕರು
ಜಾಗೃತಿ ಮಹಿಳಾ ಅಧ್ಯಯನ
ಕೇಂದ್ರ,
ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


Achala - Edited by
Dr. N. Gayathri

Published by
Dr. G. Ramakrishna on
behalf of Jagruthi Mahila
Adhyayana Kendra

Printed at
Lipi Mudrana
Bangalore - 560 004


ಆತ್ಮೀಯರೆ,

ಕಳೆದ 18 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮಹಿಳಾ ಚಳುವಳಿಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಇನ್ನೂ ಬೆಟ್ಟದಷ್ಟು ಕೆಲಸವಾಗಬೇಕಿದೆ. ಈ ಮಹತ್ತರ ಕಾರ್ಯದಲ್ಲಿ ನಾವೆಲ್ಲರೂ ಒಟ್ಟಾಗಿ ಶ್ರಮಿಸಬೇಕಿದೆ. ನೀವೂ ಅಚಲ ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯನ್ನಾಗಿ ಮಾಡಿಕೊಳ್ಳಿ ಮತ್ತು ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸುವಲ್ಲಿ ನೆರವಾಗಿ.

ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.

## ಅಚಲದ ಚಂದಾ ವಿವರಗಳು ಹೀಗಿವೆ

ವಾರ್ಷಿಕ ಚಂದಾ - ರೂ. 40/- (ವ್ಯಕ್ತಿಗಳಿಗೆ)
ರೂ. 75/- (ಸಂಸ್ಥೆಗಳಿಗೆ)
ಅಜೀವ ಚಂದಾ - ರೂ. 300/- (ವ್ಯಕ್ತಿಗಳಿಗೆ)
ರೂ. 400/- (ಸಂಸ್ಥೆಗಳಿಗೆ)


**ಅಚಲ ವಿಳಾಸ**

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ
ಬನಶಂಕರಿ 3ನೇ ಹಂತ, ಬೆಂಗಳೂರು - 560 085

## ಸಂಪಾದಕೀಯ

# ರಾಜಕೀಯದ ಗಬ್ಬುನಾತದಲ್ಲಿ ಮರೆಯಾದ ಮಾನವೀಯತೆ

ಇತ್ತೀಚೆಗೆ ಸರಣಿ ಅತ್ಯಾಚಾರ ಪ್ರಕರಣಗಳಿಂದ ಗೂಂಡಾ ಸಂಸ್ಕೃತಿಗೆ ಹೆಸರಾದ ದೆಹಲಿಯಲ್ಲಿ ಮತ್ತೊಂದು ಐತಿಹಾಸಿಕ ಸುದ್ದಿ. ಅಂತೂ ಕೊನೆಗೂ 'ತಂದೂರ್ ಕೊಲೆ' ಕುಖ್ಯಾತಿಯ ಆರೋಪಿ ಸುಶೀಲ ಶರ್ಮನಿಗೆ ಮರಣದಂಡನೆಯ ಶಿಕ್ಷೆಯ ತೀರ್ಪು ಹೊರಬಿದ್ದಿದೆ. 1995ರ ಜುಲೈ 2ರಂದು ಯುವಕಾಂಗ್ರೆಸ್‌ನ ಕಾರ್ಯಕರ್ತೆ ಹಾಗೂ ಸಂಗಾತಿಯೂ ಆಗಿದ್ದ ನೈನಾ ಸಾಹ್ನಿಯನ್ನು ದೆಹಲಿ ಯುವ ಕಾಂಗ್ರೆಸ್ ಅಧ್ಯಕ್ಷನಾಗಿದ್ದ ಸುಶೀಲ್ ಶರ್ಮ ಗುಂಡಿಟ್ಟು ಕೊಂದನು. ನಂತರ ದೆಹಲಿಯ ಅಶೋಕ ಹೋಟೆಲಿನ ತನ್ನ ಬಗಿಯಾ ರೆಸ್ಟೋರೆಂಟಿನಲ್ಲಿ ಅವಳ ದೇಹವನ್ನು ಚೂರು ಚೂರು ಮಾಡಿ ತಂದೂರು ಒಲೆಯಲ್ಲಿ ಹಾಕಿ ಸುಟ್ಟು ಸಾಕ್ಷಿಯನ್ನು ಮಾಯ ಮಾಡಬಹುದೆಂದು ಪ್ರಯತ್ನಿಸಿದ ಸುಶೀಲ್ ಶರ್ಮ ಕಳೆದ ಎಂಟು ವರ್ಷಗಳಿಂದ ಸೆರೆಮನೆಯಲ್ಲಿಯೇ ಕಳೆದು ಜನ ಮನದಲ್ಲಿ ಈಗ ಮತ್ತೊಮ್ಮೆ ಅವತರಿಸಲು ಕಾರಣವಾದದ್ದು ಇತ್ತೀಚೆಗೆ ಬಂದ ತೀರ್ಪು. ಹಲವಾರು ಕಾರಣಗಳಿಗಾಗಿ ಇದು ಐತಿಹಾಸಿಕ ಘಟನೆಯಾಗಿದೆ.

ಜುಲೈ 2ರಂದು ನಡೆದ ಘಟನೆಗೆ ಜುಲೈ 27ರಂದು, ಕೇವಲ ಇಪ್ಪತ್ತೈದು ದಿನಗಳಲ್ಲೇ ಪೋಲಿಸರು 19 ಪುಟಗಳ ಆರೋಪ ಪಟ್ಟಿ ಸಲ್ಲಿಸಿರುವುದು ಪೋಲಿಸ್ ಇತಿಹಾಸದಲ್ಲಿ ಮೊದಲು. ಈ ಆರೋಪ ಪಟ್ಟಿ ಸಿದ್ಧಪಡಿಸುವಲ್ಲಿ ಇನ್‌ಸ್ಪೆಕ್ಟರ್ ಮ್ಯಾಕ್ಸ್‌ವೆಲ್ ಪೆರೀರಾ ಸೆಷನ್ಸ್ ಕೋರ್ಟಿನಲ್ಲಿ 370 ಬಾರಿ, ಹೈಕೋರ್ಟಿನಲ್ಲಿ 55ಬಾರಿ ಹಾಗೂ ಸುಪ್ರೀಂಕೋರ್ಟಿನಲ್ಲಿ 7 ಬಾರಿ ಹಾಜರಾಗಿದ್ದರು. ಈ ಪ್ರಕರಣದಲ್ಲಿ 105 ಮಂದಿ ಸಾಕ್ಷಿ ಹೇಳಿದ್ದಾರೆ. 9 ರಾಜ್ಯಗಳನ್ನು ಸುತ್ತಿದ ಪೆರೀರಾ 1000 ಜನರ ತನಿಖೆ ಮಾಡಿದ್ದಾರೆ.

ಇಷ್ಟೆಲ್ಲ ವಿಚಾರಗಳ ನಂತರ ಅಂತೂ ಎಂಟು ವರ್ಷಗಳಾದ ಮೇಲಾದರೂ ಆರೋಪಿಗೆ ಮರಣ ದಂಡನೆಯ ಶಿಕ್ಷೆಯ ತೀರ್ಪು ಹೊರಬಿದ್ದಾಗ ದೆಹಲಿಯ ನ್ಯಾಯಾಲಯದ ಹೊರಗೆ ಕಿಕ್ಕಿರದ ಜನ ಸಮೂಹದಲ್ಲಿ ವಕೀಲರು, ಪತ್ರಕರ್ತರು, ಮಹಿಳಾ ಚಳುವಳಿಗಾರರ ಜಾತ್ರೆಯೇ ನೆರೆದಿತ್ತು. ನ್ಯಾಯಾಲಯದ ಹೊರಗೆ ಬಿಜೆಪಿ ಮಹಿಳಾ ಮೋರ್ಚಾದವರು ದೊಡ್ಡ ತಂದೂರ್ ಒಲೆಯನ್ನು ಹೊತ್ತು ತಂದು ಪ್ರತಿಭಟನಾ ಪ್ರದರ್ಶನ ಮಾಡಿದರು. ಮಾನವೀಯ ಕಾಳಜಿಯುಳ್ಳ ಎಲ್ಲರೂ ಈ ತೀರ್ಪನ್ನು ಸ್ವಾಗತಿಸುವರೆಂಬುದಲ್ಲಿ ಸಂಶಯವಿಲ್ಲ. ಆದರೆ ಈ ತೀರ್ಪನ್ನು ಚುನಾವಣೆಯ ಸಂದರ್ಭಕ್ಕೆ ರಾಜಕೀಯ ಲಾಭ ಮಾಡಿಕೊಳ್ಳುವ ಸಂಭ್ರಮ ಆಗಲೇ ಆರಂಭವಾಗಿದೆ ಸುಶೀಲ ಶರ್ಮನ ಶಿಕ್ಷೆಯನ್ನು ದೆಹಲಿಯ ಬಿಜೆಪಿ ಮಹಿಳೆಯರು ಸ್ವಾಗತಿಸಿದರೆ ಬೆಂಗಳೂರಿನ ಬಿಜೆಪಿ ಮಹಿಳೆಯರು ಮಾಡಿದ್ದಾದರೂ ಏನು?

ಬೆಂಗಳೂರಿನ ಆನೇಕಲ್ ಪುರಸಭಾಧ್ಯಕ್ಷೆ ಹಾಗೂ ಬಿಜೆಪಿ ಪಕ್ಷಕ್ಕೆ ಸೇರಿದ ಮಂಜುಳ ಆದಿಕೇಶವಲು ಇತ್ತೀಚೆಗೆ ಜಿಲ್ಲಾಧಿಕಾರಿಗಳಿಗೆ ಪತ್ರ ಬರೆದಿಟ್ಟು ಆತ್ಮಹತ್ಯೆ ಮಾಡಿಕೊಂಡರು. ನವೆಂಬರ್. 5ರಂದು ಸಾವನ್ನಪ್ಪಿದ ಆಕೆ ಆ ದಿನದಂದು ಬೆಳಗ್ಗೆ ನಡೆದ ಪುರಸಭೆಯ ಸಭೆಯಲ್ಲಿ ಉಂಟಾದ ಅವಮಾನ ಮತ್ತು ಸದಸ್ಯರ ದುರ್ವರ್ತನೆಯಿಂದ ಘಾಸಿಗೊಂಡ ಪರಿಣಾಮವಾಗಿ ಕೈಗೊಂಡ ಕ್ರಮವಿದೆಂದು ಐದು ಜನರ ಹೆಸರನ್ನು ಸೂಚಿಸಿ ಅವರಿಗೆ ಶಿಕ್ಷೆಯಾಗಬೇಕೆಂದು ಕೇಳಿಕೊಂಡಿದ್ದಾರೆ. ಘಟನೆಯ ನಂತರ ಈ ಕೃತ್ಯವನ್ನು ವಿರೋಧಿಸಿ ಸಾಕಷ್ಟು ಪ್ರತಿಭಟನೆಗಳು ನಡೆದಿವೆ. ಆದರೂ ಘಟನೆ ನಡೆದು ಎರಡು ವಾರಗಳಾದರೂ ಯಾವ ಆರೋಪಿಯ ಬಂಧನವೂ ಆಗಿಲ್ಲ. ಪೋಲಿಸ್ ಯಂತ್ರದ ನಿಷ್ಕ್ರಿಯೆ ಅಚ್ಚರಿ ಹುಟ್ಟಿಸುತ್ತದೆ. ದಿವಂಗತ ಮಂಜುಳಾರವರು ಬರೆದಿಟ್ಟಿರುವ ಮರಣಪತ್ರದಲ್ಲಿ ಮುಖ್ಯ ಆರೋಪಿ ಬಿಜೆಪಿ ಶಾಸಕರಾಗಿರುವುದರಿಂದ ಈ ಕುರಿತು ಬಿಜೆಪಿ ಪಕ್ಷದವರಾರೂ ಒಂದು ಸೊಲ್ಲೆತ್ತಿಲ್ಲ. ಘಟನೆಯನ್ನು ಖಂಡಿಸಿಲ್ಲ. ಮೃತರ ಕುಟುಂಬಕ್ಕೆ ಸಂತಾಪ ಸೂಚಿಸಿಲ್ಲ. ಸ್ತ್ರೀಯರನ್ನು ಪೂಜಿಸಿದರೆ ದೇವತೆಗಳು ರಮಿಸುತ್ತಾರೆ ಎಂದು ಹೇಳಿಕೊಂಡು ತಿರುಗುತ್ತಾ ಮಾತ್ರ ಸಮಾವೇಶಗಳನ್ನು ನಡೆಸುತ್ತಾ ರಾಜಕೀಯ ಲಾಭ ಮಾಡಿಕೊಳ್ಳುವ ಈ ಪಕ್ಷದ ಧುರೀಣರಿಗೆ ತಮ್ಮ ಪಕ್ಷದ ಸದಸ್ಯೆಗಾದ ಅನ್ಯಾಯ ನ್ಯಾಯವಾಗಿ ಕಂಡಿತೇ? ಕಣ್ಣು ಕುರುಡಾಗಿ ಕಿವಿ ಕೇಳಿಸದಾಗಿಯೇ? ಒಂದು ಚಿಕ್ಕ ಪುರಸಭಾಧ್ಯಕ್ಷೆಯ ಅಧಿಕಾರವನ್ನು ಒಪ್ಪಿಕೊಳ್ಳಲಾಗದ ಈ ಧೀಮಂತರು ಲೋಕಸಭೆ, ಶಾಸನ ಸಭೆಗಳಲ್ಲಿ ಎಂತಹ ಪ್ರಾತಿನಿಧ್ಯ ಕೊಟ್ಟಾರು? ತಮ್ಮ ಪಕ್ಷದ ಸಂಗಾತಿಗೆ ಸಂತಾಪ ಸೂಚಿಸಲಾದರೂ ಬಿಜೆಪಿ ಮಹಿಳೆಯರು ಅಲ್ಲಿಗೆ ಹೋಗಬೇಕಾಗಿತ್ತು. ತಂಡೂರಿ ಒಲೆಯ ಹೊತ್ತು ದೆಹಲಿಯ ನ್ಯಾಯಾಲಯದ ಎದುರು ಪ್ರತಿಭಟನೆ ಮಾಡಿದ ಬಿಜೆಪಿ ಪಕ್ಷದ ಮಹಿಳೆಯರು ಬೆಂಗಳೂರಿನ ಅವರ ಸೋದರಿಯ ಅನ್ಯಾಯದ ವಿರುದ್ಧ ಮಾಡಿದ್ದು ಏನು? ರಾಜಕೀಯದ ಗಬ್ಬುನಾತದಲ್ಲಿ ಎಲ್ಲ ಮಾನವೀಯ ಕಾಳಜಿಗಳೂ ಕರಗಿ ಹೋದಾವೆ?

- ಎನ್. ಗಾಯತ್ರಿ

# ಸಿಸ್ಟರ್ ನಿವೇದಿತಾ

**- ಕೆ.ಎಸ್. ವಿನೋದ್**

ಮಾರ್ಗರೇಟ್ ಐರಿಷ್ ಸ್ವಾತಂತ್ರ್ಯ ಹೋರಾಟಗಾರರ ಕುಟುಂಬದಲ್ಲಿ 28-10-1867 ರಂದು ಜನಿಸಿದರು. ಅವರ ತಂದೆ ದೀನದಲಿತರ ಸೇವೆ ಮಾಡುತ್ತಿದ್ದರು. ಅವರದು ಬಡತನದ ಬದುಕು. ಆದರೆ ಅವರ ಕುಟುಂಬದಲ್ಲಿ ಮನಸ್ಸಿಗೆ ಎಂದೂ ಬಡತನವಿರಲಿಲ್ಲ.

ಪ್ರತಿಭಾವಂತೆಯಾದ ಮಾರ್ಗರೇಟ್ ಶಿಕ್ಷಕಿಯಾಗಿ ಸೇವೆ ಸಲ್ಲಿಸುತ್ತಿದ್ದರು. ದುಡಿಯುವ ಮಹಿಳೆಯರಿಗೆ ರಾತ್ರಿ ಶಾಲೆ ನಡೆಸುತ್ತಿದ್ದರು. ಅನಾಥ ಮಹಿಳೆಯರಿಗಾಗಿ ರಾತ್ರಿ ತಂಗುದಾಣವನ್ನು ಮಾಡಿದ್ದರು. ಆ ದಿನಗಳಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಯೂರೋಪಿನ ಪೂರ್ತಿ ಅರಳಿದ ಹೊಸ ಹೊಸ ವಿಚಾರ ಧಾರೆಗಳನ್ನು ಪ್ರಾಯೋಗಿಕವಾಗಿ ಮಾಡಿ ನೋಡಲು ಕ್ರಿ.ಶ. 1892ರಲ್ಲಿ ಲಂಡನ್ನಿನ ವಿಂಬಲ್ಡನ್ನಿನಲ್ಲಿ ಒಂದು ಶಾಲೆಯನ್ನು ಪ್ರಾರಂಭಿಸಿದ್ದರು. ಅದು ಶಿಶು ಕೇಂದ್ರಿತವಾದ ಶಾಲೆಯಾಗಿತ್ತು. ಆ ಶಾಲೆಗೆ ಪ್ರಸಿದ್ಧ ಪರಿಸರವಾದಿಯಾದ ರಸ್ಕಿನ್‌ರವರ ಹೆಸರನ್ನು ಮಾರ್ಗರೇಟ್ ಇಟ್ಟರು. ಆಕೆ ಲೇಖಕಿಯಾ ಹೌದು. ಪ್ರಚಂಡ ವಾಗ್ಮಿಯೂ ಹೌದು.

ಆ ಕಾಲದ ಪ್ರಸಿದ್ಧ ಮಹಾನ್ ವ್ಯಕ್ತಿಗಳಾಗಿದ್ದ ಬರ್ನಾಡ್ ಷಾ ಥಾಮಸ್ ಹಸ್ಲಿಯವರ ಜೊತೆ ಸೆಸಮೇ ಕ್ಲಬಿನಲ್ಲಿ ಮಾರ್ಗರೇಟ್ ಸದಸ್ಯರಾಗಿದ್ದರು. ಆ ಮಹಾ ಮಹಿಳೆ ತನ್ನ ಜನ್ಮಭೂಮಿಯನ್ನು, ತನ್ನ ಪ್ರೀತಿಯ ತಾಯಿ, ತಂಗಿ, ತಮ್ಮಂದಿರನ್ನು, ಸ್ನೇಹಿತರನ್ನು ಹಾಗೂ ಅವರೇ ಸ್ಥಾಪಿಸಿದ ಪ್ರೀತಿಯ ರಸ್ಕಿನ್ ಶಾಲೆಯನ್ನು ಬಿಟ್ಟು ಅಪರಿಚಿತವಾದ ದೇಶ, ಅಪರಿಚಿತವಾದ ಭಾಷೆ, ತಿಳಿಯದ ಜನರ ಮಧ್ಯೆ ಸೇವೆ ಮಾಡಲು ಭಾರತಕ್ಕೆ ಕ್ರಿ.ಶ. 28-1-1898ರಂದು ಬಂದರು.

ನೀನು ನಮ್ಮ ದೇಶದ ಜನತೆಗೆ ಕಲಿಸಲು ಬಂದೆ ಎನ್ನದೆ, ಅವರನ್ನು ಆರಾಧಿಸಲು ಬಂದೆ ಎನ್ನಬೇಕು. ನೀನು ಮೊದಲು ಜನರ ಮನಸನ್ನು ಗೆಲ್ಲಬೇಕಾದರೆ, ಭಾರತೀಯಳಾಗಬೇಕು ಎಂದು ಸ್ವಾಮಿ ವಿವೇಕಾನಂದರು ಹೇಳಿದರು. ಉಡುಗೆ-ತೊಡುಗೆ ಎಲ್ಲದರಲ್ಲೂ ಮಾರ್ಗರೇಟ್ ಅಪ್ಪಟ ಭಾರತೀಯಳಾದಳು.

ಒಂದು ದಿನ ಬುದ್ಧನ ಪುಸ್ತಕವನ್ನು ಕೊಟ್ಟು ಮಾರ್ಗರೇಟನ್ನು 'ನಿವೇದಿತಾ' ಎಂಬ ಸುಂದರ ಹೆಸರಿನಿಂದ ಸ್ವಾಮಿ ವಿವೇಕಾನಂದರು ಕರೆದರು. ಭಾರತೀಯರ ರೀತಿ-ರಿವಾಜುಗಳನ್ನು ಕಲಿಯಲು ನಿವೇದಿತಾ ಎಂಟು ದಿನ ಶಾರದ ಮಾತೆಯವರ ಮನೆಯಲ್ಲಿದ್ದರು. ನಂತರ ಬೇರೆ ಮನೆಗೆ ಹೋದರು. ಆ ಮನೆಯನ್ನು 'ಸೋದರಿಯರ ಮನೆ' ಎಂದು ಜನ ಕರೆಯುತ್ತಿದ್ದರು. ದೊಡ್ಡ ಕನಸನ್ನು ಹೊತ್ತು ಆ ಮನೆಯಲ್ಲಿಯೇ ಬಾಲಕಿಯರ ಶಾಲೆಯನ್ನು ನಿವೇದಿತಾ ದಿನಾಂಕ 13-11-1898ರಂದು ತೆರೆದರು.

ಆ ಶಾಲೆ ಭಾರತದಲ್ಲಿ ಮಹಿಳೆ ಪ್ರಾರಂಭಿಸಿದ ಮೊದಲ ಶಾಲೆಯಾಯಿತು. ಮುಂದೆ ಅದೇ ಶಾಲೆ ನಿವೇದಿತಾ ಶಾಲೆ ಎಂದು ಪ್ರಸಿದ್ಧವಾಯಿತು. ಶಾಲೆ ಏನೋ ಪ್ರಾರಂಭವಾಯಿತು. ಆದರೆ ವಿದ್ಯಾರ್ಥಿಗಳೇ ಬರಲಿಲ್ಲ. ವಿದ್ಯಾರ್ಥಿಗಳನ್ನು ಕರೆತರಲು ಮನೆಯಿಂದ ಮನೆಗೆ ಹೋಗಿ ಮಕ್ಕಳನ್ನು ಕಳುಹಿಸಲು ನಿವೇದಿತಾ ಕೇಳಿಕೊಂಡರು. ಜನ ಅವರ ಮುಖದ ಮೇಲೆಯೇ ಬಾಗಿಲು ಹಾಕಿದರು. ನಿವೇದಿತಾ ಅತ್ಯಂತ ಪರಿಶ್ರಮದಿಂದ ಕೊನೆಗೂ ಮೂರು ಮಕ್ಕಳನ್ನು ಶಾಲೆಗೆ ಕರೆತಂದರು.

ಅವರ ಆಹಾರವಾದ ಹಣ್ಣು ಹಾಗೂ ಹಾಲಿನಲ್ಲಿ, ಹಾಲಿನ ಹಣ ಉಳಿಸಿ ಶಾಲೆ ನಡೆಸಿದರು. ಹಣದ ಮುಗ್ಗಟ್ಟಿನಿಂದ ಶಾಲೆ ಮುಚ್ಚಲ್ಪಟ್ಟಿತು. ಇಂಗ್ಲೆಂಡ್ ಹಾಗೂ ಅಮೆರಿಕಾ ಪ್ರವಾಸದಿಂದ ಶಾಲೆಗಾಗಿ ನಿಧಿ ಸಂಗ್ರಹಿಸಿ ಭಾರತಕ್ಕೆ ಬಂದು ಶಾಲೆಯನ್ನು ಪುನಃ ತೆರೆದು ನಡೆಸಿದರು. ಶಾಲೆಯಲ್ಲಿ ಮಹಿಳೆಯರಿಗಾಗಿ ಒಂದು ತರಗತಿಯೂ ನಡೆಯುತ್ತಿತ್ತು.

ತೊಂಬತ್ತು ವರ್ಷಗಳಷ್ಟು ಹಿಂದೆಯೇ ಪ್ರಾಥಮಿಕ ಶಿಕ್ಷಣದಿಂದ ಹಿಡಿದು ವಿಶ್ವವಿದ್ಯಾನಿಲಯದವರೆಗೂ ವಿಜ್ಞಾನ, ತಾಂತ್ರಿಕ ಶಿಕ್ಷಣ ಹೀಗೆ ಭಾರತಕ್ಕೆ ಸಮಗ್ರ ಶಿಕ್ಷಣದ ಒಂದು ಕರಡು ಪ್ರತಿಯನ್ನು ನಿವೇದಿತಾ ಸಿದ್ಧ ಮಾಡಿದ್ದರು. ಅವರ ಕಾರ್ಯ ಮುಂದುವರಿದಂತೆ ದೇಶದ ಪರಿಸ್ಥಿತಿಯನ್ನು ನೋಡಿ ಮೊದಲು ದೇಶಕ್ಕೆ ಸ್ವಾತಂತ್ರ್ಯ ಬರಬೇಕೆಂದು ತೀರ್ಮಾನಿಸಿದರು.

ಆದ್ದರಿಂದ ರಾಮಕೃಷ್ಣ ಮಿಷನ್‌ಗೆ ರಾಜೀನಾಮೆ ಕೊಟ್ಟು ಅಲ್ಲಿಂದ ಹೊರಬಂದರು.

ಆ ಕಾಲದ ಎಲ್ಲಾ ರಾಜಕೀಯ ನಾಯಕರುಗಳನ್ನು ಸಂಧಿಸಿ ಅಂದರೆ ಮುಂದಗಾಮಿ ನಾಯಕರಾದ ಗೋಪಾಲಕೃಷ್ಣ ಗೋಖಲೆಯವರಿಂದ ಹಿಡಿದು ಕ್ರಾಂತಿಕಾರಿಗಳವರೆಗೂ ಎಲ್ಲರನ್ನೂ ಒಟ್ಟಾಗಿ ಕೈ ಜೋಡಿಸಿ ಮೊದಲು ಸ್ವಾತಂತ್ರ್ಯಕ್ಕಾಗಿ ಹೋರಾಡಬೇಕೆಂದು ಕೇಳಿಕೊಂಡರು.

ದಾಸ್ಯ ರಾಷ್ಟ್ರ ಎಂದೂ ಪ್ರಗತಿ ಸಾಧಿಸಲಾರದೆಂದು ದೇಶದ ಅಭಿವೃದ್ಧಿಗೆ 'ಶಿಕ್ಷಣದ ಜೊತೆ ರಾಜಕೀಯ ಪ್ರಜ್ಞೆ' ಬೆಳೆಸಬೇಕೆಂದು ಸಾರಿದರು.

ಕ್ರಿ.ಶ. 1905ರಲ್ಲಿ ಮತೀಯ ಆಧಾರದ ಮೇಲೆ ಬಂಗಾಳ ವಿಭಜನೆ ಆಗಿದ್ದು ತಲಾತಲಾಂತರದಿಂದ ಒಟ್ಟಿಗೆ ಬಾಳುತ್ತಿದ್ದ

ಹಿಂದೂ ಮುಸಲ್ಮಾನರ ಮಧ್ಯೆ ಒಡಕು ತರಲು ಕ್ರಿ.ಶ. 1906ರಲ್ಲಿ ಬ್ರಿಟಿಷ್ ಆಳರಸರು ಮುಸ್ಲಿಂ ಲೀಗನ್ನು ಸ್ಥಾಪಿಸದಂತೆ ಮಾಡಿದ್ದು, ಇವೆಲ್ಲವನ್ನು ಗಮನಿಸಿದ ಸಿಸ್ಟರ್ ನಿವೇದಿತಾ ಭಾರತದ ಸಮಗ್ರತೆಗೆ, ಐಕ್ಯತೆಗೆ, ಸಹಬಾಳ್ವೆಗೆ ಗಂಡಾಂತರವಿದೆ ಎಂದು ಅರಿತರು.

ಭಾರತಕ್ಕೆ ಮುಂದೆ ಒದಗಬಹುದಾದ ಅಪಾಯವನ್ನು ಗುರುತಿಸಿದ ನಿವೇದಿತಾ ದೀಪ ಹಚ್ಚುವ ಮೊದಲು ಪ್ರತಿದಿನ ಸಂಜೆ ಎಲ್ಲಾ ಭಾರತೀಯರು ನಾವೆಲ್ಲ ಒಂದೇ ಎಂದು ಹೇಳಬೇಕೆಂದು ಪ್ರಾರ್ಥಿಸಿಕೊಂಡರು. 'ಭಾರತೀಯರು ನಾವು ಒಂದೇ' ಇದು ನಿವೇದಿತಾರವರ ಸಂದೇಶ.

ಆ ದಿನದ ಮಹಾನ್ ವ್ಯಕ್ತಿಗಳಾದ ವಿಶ್ವಕವಿ ರವೀಂದ್ರನಾಥ್ ಟಾಗೂರ್, ವಿಜ್ಞಾನಿಗಳಾದ ಡಾ|| ಜಗದೀಶ್ ಚಂದ್ರ ಬೋಸ್, ಮತ್ತು ಪ್ರಫುಲ್ಲ ಚಂದ್ರ ರೇ, ಕ್ರಾಂತಿಕಾರಿಗಳಾದ ಅರವಿಂದರು, ಸುಬ್ರಮಣ್ಯ ಭಾರತಿ, ರಾಸ್ ಬಿಹಾರಿ ಬೋಸ್, ಕಲೆಗಾರರಾದ ಅವನೀಂದ್ರನಾಥ್ ಠಾಗೂರ್, ನಂದಲಾಲ್ ಬಸು ಮುಂತಾದವರು ನಿವೇದಿತಾಳಿಂದ ಸ್ಫೂರ್ತಿ ಪಡೆದಿದ್ದರು.

ನಿವೇದಿತಾ ಭಾರತದ ಬಗ್ಗೆ ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಒಮ್ಮೆ ಕಲ್ಕತ್ತದಲ್ಲಿ ಪ್ಲೇಗ್ ರೋಗ ಪ್ರಾರಂಭವಾಯಿತು. ಜನ ಹೆದರಿಕೆಯಿಂದ ಪ್ಲೇಗ್ ತಗುಲಿದ ರೋಗಿಗಳನ್ನು ಬಿಟ್ಟು ಊರ ಹೊರಗೆ ಓಡಿದ್ದರು. ರೋಗಿಗಳು ಮನೆಯಲ್ಲಿ ಹಸಿವಿನಿಂದ, ಬಾಯಾರಿಕೆಯಿಂದ ನರಳಾಡುತ್ತಿದ್ದರು. ವಿಷಯ ತಿಳಿದ ನಿವೇದಿತಾ ತಕ್ಷಣ ಸಹಾಯ ಮಾಡಲು ಬಂದು ಸಂಸ್ಥೆಯನ್ನು ತಾತ್ಕಾಲಿಕವಾಗಿ ಪ್ರಾರಂಭಿಸಿ ಅದರ ಮೂಲಕ ರೋಗಿಗಳಿಗೆ ಅನ್ನ ನೀರು ಕೊಟ್ಟು ಪ್ರಾಣದ ಹಂಗು ತೊರೆದು ಉಪಚರಿಸಿದರು.

ಒಂದು ಗುಡಿಸಲಿನಲ್ಲಿ ಒಬ್ಬ ಹುಡುಗ ನೋವಿನಿಂದ ನರಳಾಡುತ್ತ ಅಮ್ಮ ಎಂದು ಅಳುತ್ತಿದ್ದ, ಅವನನ್ನು ತೊಡೆಯ ಮೇಲೆ ಮಲಗಿಸಿಕೊಂಡು ಅವನಿಗೆ ಸಾಂತ್ವನ ಹೇಳುತ್ತಿದ್ದಾಗ ಅವನು ಅವರ ತೊಡೆಯ ಮೇಲೆಯೇ ಕೊನೆಯ ಉಸಿರು ಎಳೆದ. ಅತ್ಯಂತ ದುಃಖದಿಂದ ನಿವೇದಿತಾ ಆ ಗುಡಿಸಲಿನಿಂದ ಹೊರಬಂದು ಕೊಚ್ಚೆ ತುಂಬಿದ ಸ್ಥಳಗಳನ್ನು ಗುಡಿಸಿ, ಸ್ವಚ್ಛ ಪಡಿಸಲು ನಿಂತರು. ಆ ದೃಶ್ಯ ಕಂಡ ವಿದ್ಯಾರ್ಥಿಗಳು ಓಡಿ ಬಂದು ಅವರ ಕೈಯಿಂದ ಪೊರಕೆಯನ್ನು ತೆಗೆದುಕೊಂಡು ಗುಡಿಸಲು ಪ್ರಾರಂಭಿಸಿದರು. ಈ ಘಟನೆಯಿಂದ ನಿವೇದಿತಾ ಯುವಜನರಿಗೆ ಸ್ಫೂರ್ತಿಯ ಬೆಳಕಾದರು. ಆಗ ನೆರವು ನೀಡುವ ಸಂಸ್ಥೆಗಳಿರಲಿಲ್ಲ, ನಿವೇದಿತಾರವರ ಸಂಸ್ಥೆಯೇ ಮೊದಲ ಸಂಸ್ಥೆಯಾಯಿತು.

ಭಾರತದಲ್ಲಿ ಸಂಶೋಧನೆಗಾಗಿ ಒಂದು ವಿಜ್ಞಾನ ಮಂದಿರವನ್ನು ಸ್ಥಾಪಿಸಬೇಕೆಂದು ನಿವೇದಿತಾ ಆಗಾಗ ಹೇಳುತ್ತಿದ್ದರು. ಕ್ರಿ.ಶ. 1917ರಲ್ಲಿ ಕಲ್ಕತ್ತದಲ್ಲಿ ವಿಜ್ಞಾನ ಮಂದಿರ ಪ್ರಾರಂಭದ ದಿನ ಈ ಮಂದಿರಕ್ಕೆ, ಸ್ಫೂರ್ತಿ ನಿವೇದಿತಾ ಎಂದು ಜಗದೀಶ್ ಚಂದ್ರಬೋಸರು ಹೇಳಿದರು. ಬೋಸ್ ಇನ್‌ಸ್ಟೂಟ್‌ನಲ್ಲಿ ನಿವೇದಿತಾರವರ ಪ್ರತಿಮೆಯನ್ನು ಸ್ಥಾಪಿಸಿದ್ದಾರೆ.

ಅನೇಕ ದೇಶಪ್ರೇಮಿಗಳಿಗೆ, ಕ್ರಾಂತಿಕಾರಿಗಳಿಗೆ, ವಿಜ್ಞಾನಿಗಳಿಗೆ, ಕಲೆಗಾರರಿಗೆ, ಸಾಹಿತಿಗಳಿಗೆ ಸ್ಫೂರ್ತಿ ನೀಡಿದ ನಿವೇದಿತಾ ಅಪಾರ ದಣಿವಿನಿಂದ ಅವರ ನಲವತ್ನಾಲ್ಕನೇ ವಯಸ್ಸಿನಲ್ಲಿ ಅಂದರೆ 16-10-1911ದಲ್ಲಿ ಡಾರ್ಜಿಲಿಂಗ್‌ನಲ್ಲಿರುವ ಜಗದೀಶ್ ಚಂದ್ರ ಬೋಸರ ಮನೆಯಲ್ಲಿ ಮರಣವನ್ನಪ್ಪಿದರು. ಅವರು ಪ್ರಾಣ ಬಿಡುವ ಮೊದಲು ಬುದ್ಧನ ವಿಶ್ವಪ್ರೇಮ ಮತ್ತು ಶಾಂತಿ ಎಂಬ ಹಾಡನ್ನು ಹಾಡಿಸಿ ಕೇಳಿದರು.

ಇನ್ನೂರು ಐವತ್ತು ವರ್ಷಗಳ ಹಿಂದೆ ಭಾರತ ಪ್ರಪಂಚದಲ್ಲಿ ಒಂದು ಶ್ರೀಮಂತ ದೇಶವಾಗಿತ್ತು, ಅಂತಹ ದೇಶ ಈಸ್ಟ್ ಇಂಡಿಯಾ ಕಂಪನಿಯ ಲೂಟಿಯಿಂದ ದಿವಾಳಿಯಾಯಿತು. ನಿವೇದಿತಾ ಭಾರತಕ್ಕೆ ಬಂದಾಗ, ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ಮಾತ್ರ ಭಾರತವನ್ನು ಲೂಟಿ ಮಾಡಿದ್ದರು. ಈಗ ಜಗತ್ತಿನಲ್ಲಿರುವ ಎಲ್ಲಾ ಸಾಮ್ರಾಜ್ಯಶಾಹಿ ಶಕ್ತಿಗಳು ಭಾರತವನ್ನು ಲೂಟಿ ಮಾಡಲು ಬಹುರಾಷ್ಟ್ರೀಯ ಕಂಪನಿಗಳ ಮೂಲಕ ಭಾರತದ ಒಳಗೆ ಸಾಲುಸಾಲಾಗಿ ನುಗ್ಗುತ್ತಿವೆ. ಜಾಗತೀಕರಣದಿಂದ ಭಾರತ ನವಸಾಮ್ರಾಜ್ಯಶಾಹಿಗಳ ಕೈಯಲ್ಲಿ ಪುನಃ ಸಿಕ್ಕಿಹಾಕಿಕೊಂಡು ಆರ್ಥಿಕ ಹಾಸ್ಯಕ್ಕೆ ಒಳಗಾಗುವ ಹಂತ ತಲುಪಿದೆ. ದೇಶಕ್ಕೆ ಗಂಡಾಂತರ ಬಂದಿದೆ.

ಸ್ವಾಮಿ ವಿವೇಕಾನಂದರು ಮಹಿಳೆ ವಿದ್ಯಾವಂತಳಾದರೆ, ಅವಳ ಸಮಸ್ಯೆಗಳನ್ನು ಅವಳೇ ಪರಿಹರಿಸಿಕೊಳ್ಳುತ್ತಾಳೆ ಎಂದು ಸ್ತ್ರೀಶಿಕ್ಷಣ ಕೊಡುವ ಸಂದರ್ಭದಲ್ಲಿ ಒಂದು ಶತಮಾನದ ಹಿಂದೆ ಹೇಳಿದರು.

ಕಲಿತ ಮಹಿಳೆಯರಾದ ನಾವು ನಮ್ಮ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವುದರ ಜೊತೆಗೆ ಸಮಾಜದ ಸಮಸ್ಯೆಗಳನ್ನು ಪರಿಹರಿಸಲು ಕೈಜೋಡಿಸಬೇಕು.

ತೊಂಬತ್ತು ವರ್ಷಗಳ ಹಿಂದೆ ಮನೆಯ ಹೊಸಲು ದಾಟಿ ಮಹಿಳೆ ಹೊರಬರಲು ಸಾಧ್ಯವಿರಲಿಲ್ಲ, ಅದೇ ದೇಶದಲ್ಲಿ ಇಂದು ಮಹಿಳೆಯರಿಗಾಗಿ ಶಾಲೆಗಳು, ಕಾಲೇಜುಗಳು ಹಾಗೂ ವಿಶ್ವವಿದ್ಯಾನಿಲಯಗಳೂ ಕೂಡ ಆಗಿವೆ.

ಲಕ್ಷಾಂತರ ಮಹಿಳೆಯರು ಕಲಿತು ವಿದ್ಯಾವಂತರಾಗಿದ್ದಾರೆ. ದುಡಿದು ಆರ್ಥಿಕವಾಗಿ ಸ್ವತಂತ್ರರಾಗುತ್ತಿದ್ದಾರೆ.

ಇದೆಲ್ಲಾ ಸಾಧ್ಯವಾದುದ್ದು ನಮ್ಮ ದೇಶದಲ್ಲಿ ಮಹಿಳಾ ಶಿಕ್ಷಣಕ್ಕಾದ ಹೋರಾಟದಿಂದ. ಹೀಗೆ ಹೋರಾಟ ಮಾಡಿದವರಲ್ಲಿ ಸಿಸ್ಟರ್ ನಿವೇದಿತಾರವರು ಒಬ್ಬರು. ❑

# ಜಾತಿ, ಲಿಂಗ ಕುರಿತ ಪ್ರತ್ಯೇಕತೆ

• ಲೋಹಿಯಾ
ಅನು : ನಟರಾಜ ಹುಳಿಯಾರ್

ಇಡೀ ಜಗತ್ತಿನಲ್ಲೇ ಭಾರತೀಯರು ಕಡುದುಃಖಿಗಳು. ಅವರು ಕಡುಬಡವರಾಗಿರುವದರ ಜೊತೆಗೆ ಅತ್ಯಂತ ರೋಗಪೀಡಿತರಾಗಿರುವುದು ಕೂಡ ಇದಕ್ಕೆ ಕಾರಣ. ಇದಕ್ಕೆ ಇನ್ನೊಂದು ಮಹತ್ವದ ಕಾರಣವೂ ಇದೆ. ಅದೆಂದರೆ, ಇತ್ತೀಚಿನ ಚರಿತ್ರೆಯಲ್ಲಿ ಅವರ ಚೇತನ ಪಡೆದುಕೊಂಡ ವಿಚಿತ್ರವಾದ ಒಂದು ತಿರುವು. ಅವರ ಬಾಯಿಂದ ನಿರ್ಲಿಪ್ತತೆಯ ತತ್ವದ ಮಾತೇನೋ ಬರುತ್ತದೆ. ಆದರೆ ಅವರು ಬದುಕುವ ಕ್ರಮದಲ್ಲಿ ಮಾತ್ರ ತೀರಾ ಕೀಳೆನ್ನಬಹುದಾದ ವ್ಯಾಮೋಹವೇ ಅತಿಯಾಗಿರುವುದು ಎದ್ದು ಕಾಣುತ್ತದೆ. ಭಾರತೀಯರು ಬದುಕಿಗೆ ಹೇಗೆ ಜೋತು ಬಿದ್ದಿದ್ದಾರೆಂದರೆ, ಅವರು ಕಡು ದುಃಖದ ಮಡುವಿನಲ್ಲೇ ನರಳಿ ಹೇಗೋ ಬದುಕು ನೂಕಬಯಸುವವರೇ ವಿನಃ ಏನಾದರೊಂದು ಮಹತ್ವದ ಪ್ರಯತ್ನ ಮಾಡುವ ಸಾಹಸಕ್ಕಿಳಿದವರಲ್ಲ. ಆದರೆ, ಹಣ ಹಾಗೂ ಅಧಿಕಾರ ಕುರಿತ ದುರಾಸೆಯಲ್ಲಿ ಮಾತ್ರ ಜಗತ್ತಿನ ಯಾವ ಜನಾಂಗವೂ ಅವರನ್ನು ಮೀರಿಸಲಾರದು.

ಜಾತಿ ಹಾಗೂ ಸ್ತ್ರೀಯರನ್ನು ಕುರಿತ ಪ್ರತ್ಯೇಕತಾವಾದೀ ಮನೋಭಾವವೇ ಭಾರತೀಯ ಚೇತನದ ಈ ಅಧೋಗತಿಗೆ ಮೂಲಕಾರಣ ಎಂಬುದು ನನ್ನ ದೃಢ ನಂಬಿಕೆ. ಸಾಹಸವನ್ನೂ, ಆನಂದವನ್ನೂ ಸೃಷ್ಟಿಸುವ ಸಾಮರ್ಥ್ಯವನ್ನೇ ಕೊಲ್ಲಬಲ್ಲ ಶಕ್ತಿ ಈ ಪ್ರತ್ಯೇಕತಾವಾದಿ ಮನಸ್ಥಿತಿಗಿದೆ.

ಆಧುನಿಕ ಆರ್ಥಿಕ ಯೋಜನೆಗಳ ಮೂಲಕ ಬಡತನವನ್ನು ಹೊಡೆದೋಡಿಸಿದರೆ, ಈ ಎರಡು ಬಗೆಯ ಪ್ರತ್ಯೇಕತೆಗಳು ತಂತಾನೇ ಮಾಯವಾಗುತ್ತವೆಂದು ತಿಳಿಯುವವರು ದೊಡ್ಡ ತಪ್ಪುಮಾಡುತ್ತಾರೆ. ಬಡತನ ಹಾಗೂ ಈ ಎರಡು ಬಗೆಯ ಪ್ರತ್ಯೇಕತೆಗಳು ಒಂದನ್ನೊಂದು ಪೋಷಿಸುತ್ತವೆ. ಈ ಎರಡೂ ಬಗೆಯ ಪ್ರತ್ಯೇಕತೆಗಳ ವಿರುದ್ಧ ಏಕಕಾಲಕ್ಕೆ ಪ್ರಜ್ಞಾಪೂರ್ವಕವಾದ ಹಾಗೂ ನಿರಂತರವಾದ ಹೋರಾಟ ನಡೆಸದಿದ್ದರೆ ಬಡತನದ ವಿರುದ್ಧ ನಾವು ಮಾಡುವ ಹೋರಾಟಗಳೆಲ್ಲ ಬರಿ ಬೊಗಳೆಯಾಗಿ ಬಿಡುತ್ತವೆ, ಅಷ್ಟೆ.

ಕಾಶಿ ಪುಣ್ಯಕ್ಷೇತ್ರದಲ್ಲಿ ಭಾರತೀಯ ಗಣರಾಜ್ಯದ ಅಧ್ಯಕ್ಷರು ಸಾರ್ವಜನಿಕವಾಗಿ ಇನ್ನೂರು ಜನ ಬ್ರಾಹ್ಮಣರ ಕಾಲು ತೊಳೆದರು. ಹೀಗೆ ಸಾರ್ವಜನಿಕವಾಗಿ ಒಬ್ಬ ಇನ್ನೊಬ್ಬನ ಕಾಲು ತೊಳೆಯುವುದು ಅಸಹ್ಯವಾದದ್ದು. ಈ ಅಸಹ್ಯಕರ ಸವಲತ್ತನ್ನು ಬ್ರಾಹ್ಮಣ ಜಾತಿಗೆ ನೀಡಿರುವುದಂತೂ ಶಿಕ್ಷಾರ್ಹ ಅಪರಾಧವಾಗಬೇಕು. ವಿದ್ಯೆ, ಗುಣ ಒಂದೂ ಇಲ್ಲದ ಅನೇಕರಿಗೆ ಕೇವಲ ಬ್ರಾಹ್ಮಣರೆಂಬ ಆಧಾರದ ಮೇಲೆ ಈ ಸವಲತ್ತನ್ನು ನೀಡುವುದಂತೂ ತರತಮ ಪ್ರಜ್ಞೆ ಸಂಪೂರ್ಣ ಮಾಯವಾಗಿರುವದರ ಸೂಚನೆ. ಸಹಜವಾಗಿಯೇ ಇವೆಲ್ಲ ಜಾತಿಪದ್ಧತಿ ಹಾಗೂ ತಿಕ್ಕಲುತನಗಳ ಜೊತೆಗೇ ಇರುತ್ತವೆ.

ರಾಷ್ಟ್ರಪತಿಗಳು ಇಂಥ ಅಸಹ್ಯಕರ ಪ್ರದರ್ಶನದಲ್ಲಿ ತೊಡಗುವುದೆಂದರೆ ನನ್ನಂಥವರನ್ನು ಕ್ರೂರವಾಗಿ ಅವಮಾನಿಸಿದಂತೆ. ಕಾರಣ, ಷಂಡ ಸಿಟ್ಟಿನಿಂದ ಉರಿದು ಬೀಳುವುದನ್ನು ಬಿಟ್ಟು ನಾವಿನ್ನೇನೂ ಮಾಡಲಾರೆವು.

ಈ ಅಪರಾಧದಲ್ಲಿ ಪಾಲ್ಗೊಂಡ, ಉತ್ತರ ಪ್ರದೇಶದ ಅಧಿಕಾರ ಕೇಂದ್ರಗಳಲ್ಲಿರುವ, ಇನ್ನಿಬ್ಬರನ್ನು ಕುರಿತು ನಾನು ಇಲ್ಲಿ ಎತ್ತಿ ಆಡುವುದಿಲ್ಲ. ಅವರಲ್ಲೊಬ್ಬ ಇಡೀ ಕಾಶಿ ತನ್ನನ್ನು ಬ್ರಾಹ್ಮಣನೆಂದು ಗುರುತಿಸಲಿ ಎಂಬ ಬಾಲಿಶ ಕಾತುರ ವ್ಯಕ್ತಪಡಿಸುತ್ತಿದ್ದ. ಆದರೆ, ಇನ್ನೊಬ್ಬ ಪ್ರಾಯಶಃ ಸೋಲೊಪ್ಪಿಕೊಂಡು ಇದೀಗ ಹಿಂದೂಧರ್ಮದ ಅತ್ಯಂತ ಕೆಳನೆಲೆಗಳನ್ನೇ ಅದರ ಚಿಂತನೆ ಹಾಗೂ ಸಂಸ್ಕೃತಿಯ ಉನ್ನತಿಯ ಶಿಖರಗಳೆನ್ನುತ್ತಾ ಗೊಂದಲವೆಬ್ಬಿಸಿದ್ದಾನೆ.

ಈಚಿನ ವರ್ಷಗಳಲ್ಲಿ ಕಾಶಿ ಪಟ್ಟಣ ಒಂದು ಕೆಟ್ಟ ಸಂಪ್ರದಾಯವನ್ನು ಪಾಲಿಸಿಕೊಂಡು ಬಂದಿದೆ. ದ್ವಿಜರ ಇತರೆ ಗುಂಪುಗಳಿಗೆ ಬ್ರಾಹ್ಮಣನ ಸ್ಥಾನಮಾನ ನೀಡುವ ತನ್ನ ಪ್ರಯತ್ನದಲ್ಲಿ ಅದು 'ಕಾಯಕದ ಮೂಲಕ ಬ್ರಾಹ್ಮಣನಾದವನನ್ನು' ಮೇಲೆಂದು ತೋರಿಸುವ ಸಲುವಾಗಿ 'ಹುಟ್ಟು ಬ್ರಾಹ್ಮಣ' ಎಂದು ಕರೆಯಲ್ಪಡುವವನನ್ನು ಗೇಲಿ ಮಾಡುತ್ತದೆ. ಈ ಕೆಟ್ಟ ಸಂಪ್ರದಾಯಕ್ಕೆ ಕಟ್ಟು ಬಿದ್ದವರು ಒಂದೋ ಬ್ರಾಹ್ಮಣರನ್ನು ಪೂಜಿಸುತ್ತಾರೆ ; ಇಲ್ಲವೇ ತೆಗಳುತ್ತಾರೆ. ಈ ವ್ಯಸನಕ್ಕೆ ತುತ್ತಾದ ಬನಿಯಾಗಳು ಹಾಗೂ ಕಾಯಸ್ಥರಿಗೆ ಹುಟ್ಟುಬ್ರಾಹ್ಮಣರ ಜೊತೆ ಸಮಾನತೆಯ ಸಂಬಂಧವನ್ನಿರಿಸಿಕೊಳ್ಳುವುದೇ ಅಸಾಧ್ಯವಾಗುತ್ತದೆ.

ರಾಷ್ಟ್ರಪತಿಗಳ ಆ ನಾಚಿಕೆಗೇಡಿತನ ವರ್ತನೆಯ ಕತೆಯನ್ನು ನಾನು ಕೇಳಿದ್ದು ಕೂಡ ಒಬ್ಬ ಬ್ರಾಹ್ಮಣನಿಂದಲೇ ಎಂಬುದನ್ನು ಇಲ್ಲಿ ದಾಖಲಿಸಬೇಕು. ಭಾರತದ ರಾಷ್ಟ್ರಪತಿಯಿಂದ ಕಾಲು ತೊಳೆಸಿಕೊಳ್ಳಲು ಕರೆಸಲಾದ ಇನ್ನೂರ ಜನರಲ್ಲಿ ಇವನೂ

ಒಬ್ಬನಾಗಿದ್ದ. ಆದರೆ ಆ ಹೀನ ಆಚರಣೆ ಶುರುವಾಗುವ ಮುನ್ನ, ತನ್ನ ದೇಶದ ರಾಷ್ಟ್ರಪತಿಯಿಂದ ಕಾಲು ತೊಳೆಸಿಕೊಳ್ಳುವ ಪಾಪ ಹೊರಬೇಕಾಗುತ್ತದೆ ಎಂಬ ಭಯದಿಂದ ನಡುಗಿಹೋದ ಏಕೈಕ ವ್ಯಕ್ತಿ ಈತ. ನಂತರ ಈತನ ಬದಲಿಗೆ ಇನ್ನೊಬ್ಬನನ್ನು ತರಲಾಯಿತು.

ಆ ಅನಾಗರಿಕ ರಾಕ್ಷಸ ಪಂದ್ಯದಲ್ಲಿ ಮನುಷ್ಯನಂತೆ ವರ್ತಿಸಿದ ಏಕೈಕ ವ್ಯಕ್ತಿ ಈತ. ಈ ಬಡ ಸಂಸ್ಕೃತ ಮೇಷ್ಟರನ್ನು ನಾನು ಎಂದೆಂದಿಗೂ ಗೌರವದಿಂದ ಕಾಣುತ್ತೇನೆ. ಹುಟ್ಟಿನಿಂದ ಬ್ರಾಹ್ಮಣರಾದರೂ ಇಂಥವರೇ ಇಂದು ದಕ್ಷಿಣಭಾರದ ವಿಕೃತ ಬ್ರಾಹ್ಮಣ ವಿರೋಧವು ಇಡೀ ದೇಶವನ್ನು ನುಂಗದಂತೆ ತಡೆಯುತ್ತಿದ್ದಾರೆ.

ಭಾರತೀಯ ಗಣರಾಜ್ಯ ಹಾಗೂ ಮಾನವ ಚೇತನ ಹೀಗೆ ಅಧೋಗತಿ ಗಿಳಿಯುತ್ತಿರುವುದನ್ನು ಸುಮ್ಮನೆ ಕಣ್ಣುಬಿಟ್ಟುಕೊಂಡು ನೋಡುತ್ತಿರುವ ಕಾಶಿ ಹಾಗೂ ಭಾರತದ ಇತರ ಭಾಗದ ಬ್ರಾಹ್ಮಣರಿಗೆ ಒಂದು ಮಾತು ನೆನಪಿರಲಿ ; ದುರುಳ ವರ್ತನೆಗಳೂ ಅದರಿಂದ ಹುಟ್ಟುವ ಖುಷಿಯೂ ಒಂದಲ್ಲ ಒಂದು ದಿನ ಅವರಿಗೇ ಮುಳುವಾಗುತ್ತವೆ.

ವ್ಯಕ್ತಿಯೊಬ್ಬ ಬ್ರಾಹ್ಮಣನೆನ್ನುವ ಒಂದೇ ಆಧಾರದ ಮೇಲೆ ಇನ್ನೊಬ್ಬ ಅವನ ಕಾಲು ತೊಳೆಯುವುದೆಂದರೆ ಜಾತಿಪದ್ಧತಿ, ಬಡತನ ಹಾಗೂ ದುಃಖಗಳು ನಿರಾತಂಕವಾಗಿ ಮುಂದುವರೆಯಲು ಅನುವುಮಾಡಿಕೊಡುವುದೆಂದೇ ಅರ್ಥ. ಇದರ ಜೊತೆಗೇ ನೇಪಾಳಿ ಬಾಬಾ, ಗಂಗಾಜಲದ ಮೇಲೆ ಆಣೆಯಿಡಿಸಿ ಓಟು ಕೇಳುವುದು ಇತ್ಯಾದಿಗಳು ಕೂಡ ಸರಪಳಿಯಂತೆ ಮುಂದುವರೆಯುತ್ತವೆ.

ಇಂಥ ಹೀನಕೃತ್ಯಗಳನ್ನು ಪ್ರೇರೇಪಿಸುವ ಮನಸ್ಸು ದೇಶದ ಕಲ್ಯಾಣ ಕುರುತಾಗಲೀ, ಹೊಸ ಹೊಸ ಸಾಹಸಗಳನ್ನು ಕುರಿತಾಲೀ ಉತ್ಸಾಹದಿಂದ ಯೋಜನೆಗಳನ್ನು ರೂಪಿಸಲಾರದು. ಇಂಥ ಮನಸ್ಸು ಕೋಟ್ಯಾಂತರ ಜನ ಸಮೂಹವನ್ನು ಕೆಳಗೆ ತುಳಿಯುತ್ತಲೇ ಇರುತ್ತದೆ. ಅವರಿಗೆ ಆಧ್ಯಾತ್ಮಿಕ ಸಮಾನತೆಯನ್ನು ಕೊಡಲು ನಿರಾಕರಿಸಿದಂತೆ, ಸಾಮಾಜಿಕ ಹಾಗೂ ಆರ್ಥಿಕ ಸಮಾನತೆಯಿಂದಲೂ ಅವರನ್ನು ವಂಚಿಸುತ್ತಿರುತ್ತದೆ.

ಇಂಥ ಮನಸ್ಸು ದೇಶದ ಕೃಷಿಯನ್ನಾಗಲೀ, ಕೈಗಾರಿಕೆಯನ್ನಾಗಲೀ ಸುಧಾರಿಸಲಾರದು. ಕಾರಣ, ಈ ಬಗೆಯ ಮನಸ್ಸು ತಿಗಣೆ ಹಾಗೂ ಸೊಳ್ಳೆಗಳನ್ನು ಹುಟ್ಟು ಹಾಕುವ ತಿಪ್ಪೆ ಕೊಳಚೆಗಳ ತವರೂರು. ಹೀಗಿರುವಾಗ ಕೇವಲ ಮೇಲುಜಾತಿಯ ಶ್ರೀಮಂತರ ಮನೆಯ ಸುತ್ತ ಡಿ.ಡಿ.ಟಿ. ಸಿಂಪಡಿಸಿದರೇನು ಪ್ರಯೋಜನ? ತಿಗಣೆ, ಸೊಳ್ಳೆ, ಬರಗಾಲ ಹಾಗೂ ಸಾರ್ವಜನಿಕವಾಗಿ ಬ್ರಾಹ್ಮಣರ ಕಾಲು ತೊಳೆಯುವುದು ಇವೆಲ್ಲ ಒಂದಕ್ಕೊಂದು ಪೂರಕವಾಗಿದೆ. ಜೊತೆಗೇ ಅವು ಮಾನಸಿಕ ಹಾದರವನ್ನೂ, ಆಲೋಚನೆಗಳಲ್ಲಿ ಕೂಪಮಂಡೂಕತ್ವವನ್ನು ನೀರೆರೆದು ಪೋಷಿಸುತ್ತವೆ. ಕಾರಣ, ವಿಭಿನ್ನ ಉದ್ಯೋಗಗಳಲ್ಲಿ ತೊಡಗಿದ, ವಿಭಿನ್ನ ಸಾಮಾಜಿಕ ಶ್ರೇಣಿಗಳಲ್ಲಿ ಹುಟ್ಟಿದ ಜನರ ಮನಸ್ಸುಗಳ ನಡುವಣ ಸಂವಾದದ ಸಾಧ್ಯತೆಯೇ ಇಲ್ಲಿ ಸತ್ತುಹೋಗಿರುತ್ತದೆ.

ಕರಾಳ ನಿರಾಶೆ ಎಲ್ಲೆಡೆ ಕವಿದಿದೆ. ಎತ್ತ ನೋಡಿದರೂ ಹೊಸತನವಿಲ್ಲ. ಬ್ರಾಹ್ಮಣರ ಕಾಲು ತೊಳೆಯುವ ರಾಷ್ಟ್ರಪತಿಯಿರುವ ದೇಶದಲ್ಲಿ ಅರ್ಚಕ ಹಾಗೂ ಚಮ್ಮಾರನ ನಡುವೆ, ಶಿಕ್ಷಕ ಹಾಗೂ ಅಗಸಗಿತ್ತಿಯ ನಡುವೆ ಮುಕ್ತ ಮಾತುಕತೆಯ ಸಾಧ್ಯತೆಯೇ ಇರುವುದಿಲ್ಲ.

ರಾಷ್ಟ್ರಪತಿಯೊಬ್ಬನ ಬಗ್ಗೆ ನಮಗೆ ಭಿನ್ನಾಭಿಪ್ರಾಯಗಳಿರಬಹುದು, ಅವನ ನಡವಳಿಕೆಗಳು ನಮಗೆ ವಿಚಿತ್ರವೆನಿಸಬಹುದು. ಆದರೂ ಅವನನ್ನು ನಾವು ಗೌರವಿಸಬಯಸುತ್ತೇವೆ. ಆದರೆ ಅಂಥ ಗೌರವಕ್ಕೆ ಅರ್ಹನಾಗಬೇಕಾದರೆ ರಾಷ್ಟ್ರಪತಿ ಕೂಡ ನಾಗರಿಕ ನಡವಳಿಕೆಯ ಕೆಲವು ಮೂಲಭೂತ ನಿಯಮಗಳನ್ನು ಉಲ್ಲಂಘಿಸ ಕೂಡದು.

ಗಂಡು-ಹೆಣ್ಣುಗಳ ನಡುವಣ ಸಾಮಾಜಿಕ ಸಂಬಂಧ ಕುರಿತು ರಾಷ್ಟ್ರಪತಿಗಳು ವ್ಯಕ್ತಪಡಿಸಿದ ಅಭಿಪ್ರಾಯ ಕುರಿತು ಪ್ರತಿಕ್ರಿಯೆ - ಅದು ಪ್ರಕಟವಾಗಲಿಲ್ಲ - ನೀಡುವ ಸಂದರ್ಭ ಹಿಂದೊಮ್ಮೆ ನನಗೆ ಬಂದಿತ್ತು. ಆದರೆ ಆಗಿನ್ನೂ ಅವರ ಬಗೆಗೆ ನಾನು ಪೂರಾ ಗೌರವ ಕಳೆದುಕೊಂಡಿರಲಿಲ್ಲ. ಈಗ ಮಾತ್ರ ಅವರು ನನ್ನ ಗೌರವವನ್ನು ಸಂಪೂರ್ಣವಾಗಿ ಕಳೆದುಕೊಂಡಿದ್ದಾರೆ. ಸೋದರನನ್ನು ಸೋದರನೇ ಕೊಲ್ಲುವ ಈ ಅಪರಿಹಾರ್ಯ ಕೃತ್ಯದಿಂದಾಗಿ ಅವರು ನನ್ನ ಗೌರವವನ್ನು ಪೂರ್ತಿ ಕಳೆದುಕೊಂಡಿದ್ದಾರೆ. ಕಾರಣ, ಬ್ರಾಹ್ಮಣರ ಕಾಲುಗಳನ್ನು ಸಾರ್ವಜನಿಕವಾಗಿ ತೊಳೆಯುವ ಕೈಗಳೂ ಶೂದ್ರರನ್ನೂ ದಲಿತರನ್ನೂ ಒದೆಯಬಲ್ಲ ಕಾಲುಗಳ ಜೊತೆಗೇ ಇರುತ್ತವೆ.

ಡಾ. ರಾಜೇಂದ್ರ ಪ್ರಸಾದರು ನನ್ನಂಥವರ ಗೌರವ ಕುರಿತು ಅಷ್ಟೇನೂ ತಲೆಕೆಡಿಸಿಕೊಳ್ಳಲಾರದು. ಕಾರಣ ಸಮಾಜವಾದ-ಅಷ್ಟೇ ಏಕೆ, ಪ್ರಜಾಪ್ರಭುತ್ವ ಕೂಡ ಇವತ್ತು ಭಾರತದಲ್ಲಿರುವಷ್ಟು ನಿರ್ವೀರ್ಯವಾಗಿದ್ದಿರದಿದ್ದರೆ ಕಾಶಿಯ ಯುವಕರು ತೀವ್ರವಾಗಿ ದಿಗ್ಭ್ರಮೆಗೊಂಡಿರುತ್ತಿದ್ದರು ;

ನೂರಾರು ಜನರು ಪ್ರತಿಭಟನಾ ಪ್ರದರ್ಶನ ನಡೆಸಿ ಈ ಅಸಹ್ಯಕರ ಪ್ರದರ್ಶನ ಸಾಧ್ಯವಾಗದಂತೆ ತಡೆಯುತ್ತಿದ್ದರು. ಆದರೆ ಹಾಗಾಗಲಿಲ್ಲ.

ರಾಷ್ಟ್ರಪತಿ ಹಾಗೂ ಕಾಶಿಯ ಈ ಘಟನೆಯಲ್ಲಿ ಅವರ ಜೊತೆಗಿದ್ದ ಉತ್ತರ ಪ್ರದೇಶದ ಇತರರ ಅಪರಾಧದ ವ್ಯಾಪ್ತಿಯನ್ನು ತೋರಿಸಿಕೊಡಲು ಬೇರೆ ಬೇರೆ ವಿಧಾನಗಳಿರಬಹುದು, ಆದರೆ, ತಕ್ಷಣಕ್ಕೆ ಅವರು ನನ್ನ ಹಾಗೂ ನನ್ನಂಥ ಲಕ್ಷಾಂತರ ಜನರ ಗೌರವ ಕಳೆದುಕೊಂಡಿದ್ದಾರೆಂದು ಮತ್ತೆ ಮತ್ತೆ ಹೇಳಲೇಬೇಕಾಗಿದೆ.

ಭಾರತೀಯ ಗಣರಾಜ್ಯದ ಅಧ್ಯಕ್ಷರು ಹೀಗೆ ಸಾರ್ವಜನಿಕವಾಗಿ ತಮ್ಮ ಘನತೆಯನ್ನು ತಾವೇ ಕಳೆದುಕೊಳ್ಳಲು ಅವಕಾಶ ನೀಡಿದ್ದಕ್ಕಾಗಿ ಪ್ರಧಾನಿಯನ್ನಾಗಲೀ ಸರ್ಕಾರವನ್ನಾಗಲೀ ನಾನು ದೂಷಿಸುವುದಿಲ್ಲ. ಅವರ ವಿರುದ್ಧ ನನ್ನ ಆಪಾದನೆ ಮತ್ತುಷ್ಟು ಗಂಭೀರವಾದದ್ದು. ಜಾತಿ ಪದ್ಧತಿಗೆ ಸಂಬಂಧಿಸಿದ ಈ ಸಮಸ್ಯೆಯಲ್ಲಿ ತನ್ನ ಪಾತ್ರವೇನೆಂಬುದನ್ನು ಯಾರಿಗೂ ಗೊತ್ತಾಗದಂತೆ ಕಿಲಾಡಿತನದಿಂದ ಮುಚ್ಚಿಡಬಲ್ಲ ಮನುಷ್ಯನೊಬ್ಬ ಅತ್ಯಂತ ಕಿಡಿಗೇಡಿಯೇ ಸರಿ.

ನೆಹರೂ ಒಮ್ಮೆ ಬ್ರಾಹ್ಮಣರ ಸೇವಾ ಮನೋಭಾವ ಎಂಬ (Brahminic Spirit of Service) ವಿಶೇಷಣಗಳನ್ನು ಬಳಸಿ ಬ್ರಾಹ್ಮಣರನ್ನು ಹೊಗಳಿದ ಮಾತುಗಳು ಈ ಹಿಂದೆಯೇ ಪ್ರಕಟವಾಗಿವೆ. ಅಂದರೆ, ಡಾ. ರಾಜೇಂದ್ರ ಪ್ರಸಾದರಂತವರು ಏನನ್ನು ಬಹಿರಂಗವಾಗಿ ಮಾಡಿಬಿಡುತ್ತಾರೋ ಅಂಥದ್ದನ್ನು ನೆಹರೂ ಪ್ರತ್ಯಕ್ಷವಾಗಿ ಮಾಡದಿದ್ದರೂ ಪರೋಕ್ಷವಾಗಿ ಮಾಡಿಬಿಟ್ಟಿರುತ್ತಾರೆ.

ಜಾತಿ ಪದ್ಧತಿಯ ವಿರುದ್ಧ ಸರ್ವೇಸಾಮಾನ್ಯವಾದ ಬೊಗಳೆ ಭಾಷಣಗಳನ್ನು ಮಾಡಿರುವುದನ್ನು ಬಿಟ್ಟರೆ, ಜಾತಿಪದ್ಧತಿಯನ್ನು ಹೊಡೆದೋಡಿಸಿ ಸರ್ವಸಮಾನತೆ ತರಲು ಪ್ರಧಾನಮಂತ್ರಿ ಏನು ಮಾಡಿದ್ದಾರೆ ಎಂದು ತಿಳಿಯಲು ನಾನು ಕಾತುರನಾಗಿದ್ದೇನೆ.

ಈ ದಿಸೆಯಲ್ಲಿ ಒಂದು ಸಣ್ಣ ಪ್ರಯೋಗವನ್ನೇ ಮಾಡಬಹುದು. ಆಡಳಿತಾತ್ಮಕ ಸೇವೆ ಹಾಗೂ ಸೇನೆಗೆ ಸಿಬ್ಬಂದಿಯನ್ನು ನೇಮಿಸುವಾಗ ಅಭ್ಯರ್ಥಿಗೆ ಇರಬೇಕಾದ ಎಲ್ಲ ಅರ್ಹತೆಗಳ ಜೊತೆಗೆ ಶೂದ್ರ ಮತ್ತು ಬ್ರಾಹ್ಮಣರ ನಡುವಣ ಅಂತರ್ಜಾತೀಯ ವಿವಾಹ ಕೂಡ ಒಂದು ಅರ್ಹತೆಯೆಂದು ಪರಿಗಣಿತವಾಗಬೇಕು. ಹಾಗೆಯೇ ಜಾತಿ-ಜಾತಿಗಳ ನಡುವಣ ಸಹ-ಭೋಜನವನ್ನು ಒಲ್ಲೆ ಎನ್ನುವುದು ಸರ್ಕಾರಿ ನೌಕರಿಗೆ ಸೇರಲು ಅನರ್ಹತೆಯಾಗಬೇಕು. ಆಗ ಮಾತ್ರ ಜಾತಿಪದ್ಧತಿಯ ವಿರುದ್ಧ ಪ್ರಾಮಾಣಿಕವಾದ ಯುದ್ಧ ಆರಂಭವಾಗುತ್ತದೆ. ಆದರೆ ಅಂಥ ದಿನ ಮಾತ್ರ ಇನ್ನೂ ಬರಬೇಕಾಗಿದೆ.

ಈಗ ನಾನು ಪ್ರತಿಪಾದಿಸುತ್ತಿರುವ ಬ್ರಾಹ್ಮಣ - ಶೂದ್ರರ ನಡುವಣ ವಿವಾಹವನ್ನು ಬನಿಯಾ ಹಾಗೂ ಬ್ರಾಹ್ಮಣರ ನಡುವಿನ ವಿವಾಹ ಹಾಗೂ ಅಂಥ ಇನ್ನಿತರ ವಿವಾಹಗಳ ಜೊತೆಗೆ ಸೇರಿಸಿ ಗೊಂದಲ ಮಾಡಿಕೊಳ್ಳಬಾರದು. ಕಾರಣ ಬನಿಯಾ ಮತ್ತು ಬ್ರಾಹ್ಮಣರ ನಡುವಣ ವಿವಾಹಗಳು ಕೊಂಚ ಸುಲಭ ಹಾಗೂ ಅವು ಒಂದು ಚೌಕಟ್ಟಿನಲ್ಲೇ ನಡೆಯುವಂಥವು.

ನಾನು ಹೇಳುತ್ತಿರುವ ಮಾದರಿಯ ವಿವಾಹಗಳನ್ನು ಇಷ್ಟಪಡದ ಮಡಿವಂತರು ಇದು ನಾಗರಿಕರ ಹಕ್ಕುಗಳ ಉಲ್ಲಂಘನೆ ಎಂದು ಹುಯಿಲೆಬ್ಬಿಸಬಹುದು. ಹಾಗಾದರೆ, ಕೆಲವು ಅನುವಂಶಿಕ ಗುಂಪುಗಳಿಗೆ ಮಾನವ ಆಯ್ಕೆಗಳನ್ನು ಸೀಮಿತಗೊಳಿಸುವ ಕೆಟ್ಟ ಸಂಪ್ರದಾಯದಿಂದ ನಾಗರಿಕ ಹಕ್ಕುಗಳ ಉಲ್ಲಂಘನೆಯಾಗಿಲ್ಲವೆ? ಸರ್ಕಾರಿ ನೌಕರಿಗೆ ಆಯ್ಕೆಮಾಡುವಾಗ ಅಂತರ್ಜಾತೀಯ ವಿವಾಹವನ್ನು ಒಂದು ಅರ್ಹತೆಯನ್ನಾಗಿ ಪರಿಗಣಿಸುವುದನ್ನು ಕುರಿತು ಕೆಲವರು ನಗೆಮಾಡಬಹುದು. ಆದರೆ ಪ್ರತಿಯೊಂದು ರಾಷ್ಟ್ರಪ್ರಭುತ್ವಕ್ಕೂ ತನ್ನ ಭದ್ರತೆ ಹಾಗೂ ಐಕ್ಯತೆಗಾಗಿ ಹೋರಾಡುವ ಹಕ್ಕಿರುವಂತೆಯೇ, ಎಲ್ಲ ಬಗೆಯ ಹೊಸತನವೂ ಇಲ್ಲಿಂದ ಪಲಾಯನ ಮಾಡುವಂತೆ ಮಾಡಿರುವ ಈ ಕರಾಳ ನಿರಾಶೆಯನ್ನು ಹೊಡೆದೋಡಿಸುವ ಹಕ್ಕಿದೆ.

ಈ ಮಾತುಗಳನ್ನಾಡುವಾಗ ನನಗೆ ಮತ್ತೆ ಗಂಡು - ಹೆಣ್ಣುಗಳ ನಡುವಣ ಭೇದ ನೆನಪಾಗುತ್ತಿದೆ. ಜಾತ್ಯಾಧಾರಿತ ಪ್ರತ್ಯೇಕತೆಗೂ, ಲಿಂಗಾಧಾರಿತ ಪ್ರತ್ಯೇಕತೆಗೂ ಪರಸ್ಪರ ಸಂಬಂಧವಿದೆ. ಅವು ಒಂದನ್ನೊಂದು ಪೋಷಿಸುತ್ತಾ ಹೋಗುತ್ತವೆ. ಫಲವಾಗಿ ನಮ್ಮ ಬದುಕಿನಲ್ಲಿ, ಪರಸ್ಪರ ಮಾತುಕತೆಗಳಲ್ಲಿ ಹೊಳಪೇ ಇಲ್ಲದಂತಾಗುತ್ತದೆ ; ಜೀವನದಿಗಳು ಸರಾಗವಾಗಿ ಹರಿಯುವುದು ನಿಂತು ಹೋಗುತ್ತದೆ.

ಒಮ್ಮೆ ಕಾಫಿ ಹೌಸೊಂದರಲ್ಲಿ ಕೂತು ಹರಟುತ್ತಿದ್ದವರ ಜೊತೆಗೆ ಮಾತಾಡುತ್ತಿದ್ದೆ. ಇಂಥ ಕಾಫಿ ಟೇಬಲ್ ಮಾತುಕತೆಗಳೇ ಫ್ರೆಂಚ್ ಕ್ರಾಂತಿಯನ್ನು ಬೆಳೆಸಿದವೆಂದು ಅವರಲ್ಲೊಬ್ಬ ಹೇಳಿದ. ನನಗೆ ಸಿಟ್ಟಿನಿಂದ ಮೈ ಉರಿಯತೊಡಗಿತು. ಅಲ್ಲಿ ನೋಡಿದರೆ ನಮ್ಮ ಜೊತೆ ಒಬ್ಬ ಶೂದ್ರನಾಗಲೀ, ಹೆಣ್ಣುಮಗಳಾಗಲೀ ಇರಲಿಲ್ಲ. ಇಂಥ ನಿರ್ಜೀವ ಗುಂಪಿನಲ್ಲಿದ್ದ ನಮ್ಮಂಥ ಗೊಡ್ಡು ಜನರೆಲ್ಲ ನಿನ್ನೆಯ

ಮೇವನ್ನು ಸುಮ್ಮನೆ ಮೆಲುಕು ಹಾಕುತ್ತಿರುವ ದನಗಳಂತಿದ್ದೆವು.

ಈ ದೇಶದಲ್ಲಿ ಕಮ್ಯುನಿಸ್ಟ್, ಕಾಂಗ್ರೆಸ್ ಹಾಗೂ ಸಮಾಜವಾದಿ ರಾಜಕಾರಣದಿಂದ ಹಿಡಿದು ಎಲ್ಲ ಬಗೆಯ ರಾಜಕಾರಣದಲ್ಲೂ ಉದ್ದೇಶ ಪೂರ್ವಕವಾಗಿಯೋ ಅಥವಾ ರೂಢಿಗತವಾಗಿಯೋ ಒಂದು ವಿಷಯ ಕುರಿತು ಮಾತ್ರ ರಾಷ್ಟ್ರೀಯ ಸಹಮತವಿದೆ. ಅದೆಂದರೆ, ಇಡೀ ಜನಸಂಖ್ಯೆಯ ಮುಕ್ಕಾಲು ಭಾಗದಷ್ಟಿರುವ ಶೂದ್ರರನ್ನೂ, ಸ್ತ್ರೀಯರನ್ನೂ ತುಳಿಯುವುದು ಹಾಗೂ ಅವರ ಮತದಾನದ ಹಕ್ಕನ್ನು ಕಸಿದುಕೊಳ್ಳುವುದು.

ಭಾರತೀಯ ಹೆಣ್ಣಿನ ಸ್ಥಿತಿಯಂತೂ ಅತ್ಯಂತ ಶೋಚನೀಯವಾಗಿದೆ. ಅವಳ ಅಡಿಗೆಮನೆಯ ಗುಲಾಮಗಿರಿಯ ಜೊತೆಗೆ, ಅವಳು ಬಳಸುವ ಒಲೆಯ ಉಸಿರು ಕಟ್ಟಿಸುವ ಹೊಗೆಯೂ ಸೇರಿಕೊಂಡು ಪರಿಸ್ಥಿತಿ ಇನ್ನಷ್ಟು ಕರುಣಾಜನಕವಾಗಿಬಿಟ್ಟಿದೆ. ಅವಳಿಗೂ ಅಡಿಗೆ, ಊಟಕ್ಕೆ ನಿಗದಿಯಾದ ವೇಳಾಪಟ್ಟಿಯೊಂದಿರಬೇಕು. ಅಡಿಗೆಮನೆಯಲ್ಲಿ ಹೊಗೆ ಸಲೀಸಾಗಿ ಹೋಗುವ ಚಿಮಣಿಯಿರಬೇಕು. ಅರೆ ಹೊಟ್ಟೆ, ನಿರುದ್ಯೋಗ ಹಾಗೂ ಅನ್ಯಾಯಗಳ ವಿರುದ್ಧದ ಹೋರಾಟದಲ್ಲಿ ಅವಳೂ ಪಾಲ್ಗೊಳ್ಳಬೇಕು.

ಭಾರತೀಯ ಸ್ತ್ರೀಯರನ್ನು ಕುರಿತು ಸೊಗಸಾದ ಲೇಖನಗಳನ್ನು ಬರೆಯುತ್ತಿರುವ ಶಕುಂತಲಾ ಶ್ರೀವಾಸ್ತವ ಅವರು ಮಾಮೂಲಿ ಸ್ತ್ರೀವಾದಿಗಳಂತೆ ಎಲ್ಲ ತಪ್ಪನ್ನೂ ಗಂಡಿನ ಮೇಲೆ ಹೇರುವ ಆವೇಶದಿಂದ ಮುಕ್ತರಾಗಿದ್ದಾರೆ ಎಂಬುದನ್ನು ಕಂಡು ನನಗೆ ಖುಷಿ. ಅಷ್ಟೇ ಅಲ್ಲ, ಗಂಡು ಹೆಣ್ಣುಗಳಿಬ್ಬರಲ್ಲೂ ಕೆಲವು ತಪ್ಪುಗಳಿವೆ - ಆದರೆ ಅವುಗಳ ಮಟ್ಟ ಬೇರೆಯಿರಬಹುದು - ಎಂಬುದನ್ನು ಅವರು ಗುರುತಿಸಲು ತಯಾರಿದ್ದಾರೆ. ಆದರೂ ಅವರು ಕ್ರಮಿಸಬೇಕಾದ ಹಾದಿ ಇನ್ನೂ ದೂರವಿದೆ.

ಮಹತ್ವದ ಸಮ್ಮೇಳನವೊಂದರಲ್ಲಿ ಶಕುಂತಲಾ ಶ್ರೀವಾಸ್ತವ ಅವರು ವೇದಿಕೆಗೆ ಬರಬೇಕೆಂದು ಕೇಳಿಕೊಂಡಾಗ, ಆಕೆ ಪ್ರೇಕ್ಷಕರ ಗ್ಯಾಲರಿಯಿಂದ ಅಲುಗಾಡಲೂ ಒಲ್ಲೆನೆಂದದ್ದು ನನಗೆ ನೆನಪಿದೆ. ಅದಕ್ಕೇನು ಮಾಡಬೇಕು ನನಗೆ ಗೊತ್ತಿತ್ತು. ರಟ್ಟೆ ಹಿಡಿದು ಎಳೆದುಕೊಂಡು ಹೋಗುತ್ತೇನೆ ಎಂದು ನಾನು ಬೆದರಿಕೆ ಹಾಕಿದ ಮೇಲೆಯೇ ಆಕೆ ಕೊಂಚ ಮೆದುವಾಗಿದ್ದು ಹಾಗೂ ಗ್ಯಾಲರಿಯಿಂದ ವೇದಿಕೆಗೆ ಬಂದದ್ದು.

ಯಾವುದು ಸನ್ನಡತೆ ಹಾಗೂ ಯಾವುದು ಪಾಪ ಎಂಬ ಪ್ರಶ್ನೆಯನ್ನು ಇನ್ನು ಹೆಚ್ಚು ಕಾಲ ಕಡೆಗಣಿಸಲಾಗದು. ಆಧ್ಯಾತ್ಮಿಕತೆ ಅಖಂಡವಾದದ್ದು, ಆದರೆ ನೈತಿಕತೆ ಸಾಪೇಕ್ಷವಾದದ್ದು ; ಹೀಗಾಗಿ ಪ್ರತಿಯೊಂದು ಯುಗ ಹಾಗೂ ಪ್ರತಿಯೊಬ್ಬ ವ್ಯಕ್ತಿ ತನ್ನದೇ ಆದ ನಿರ್ದಿಷ್ಟ ನೈತಿಕತೆಯನ್ನು ಹುಡುಕಿಕೊಳ್ಳಬೇಕು ಎಂಬುದು ನನ್ನ ನಂಬಿಕೆ.

ಉದಾಹರಣೆಗೆ ಇಬ್ಬರು ಸ್ತ್ರೀಯರನ್ನು ತೆಗೆದುಕೊಳ್ಳೋಣ. ಒಬ್ಬಳು ತನ್ನ ಇಡೀ ಜೀವಮಾನದಲ್ಲಿ ಒಂದೇ ಒಂದು ಮಗುವಿಗೆ ಜನ್ಮ ಕೊಟ್ಟಿದ್ದಾಳೆ. ಆ ಮಗು ವೈವಾಹಿಕ ಚೌಕಟ್ಟಿನಾಚೆಗೆ ಜನಿಸಿದ್ದಾಗಿರಬಹುದು. ಇನ್ನೊಬ್ಬಳಿದ್ದಾಳೆ ಆಕೆ ನೈತಿಕವಾಗಿಯೇ ಅರ್ಧ ಡಜನ್ ತಂಟೇಕೋರರಿಗೆ ಜನ್ಮ ಕೊಟ್ಟಿದ್ದಾಳೆಂದಿಟ್ಟು ಕೊಳ್ಳಿ. ಇವರಿಬ್ಬರಲ್ಲಿ ಯಾರು ಹೆಚ್ಚು ಸಜ್ಜನರು ಹಾಗೂ ಯಾರು ಹೆಚ್ಚು ನೈತಿಕತೆಯುಳ್ಳವರು? ಮೂವರು ಗಂಡಂದಿರಿಗೆ ವಿಚ್ಛೇದನೆ ನೀಡಿ ನಾಲ್ಕನೆಯ ಮದುವೆಯಾದ ಹೆಂಗಸು ಹಾಗೂ ತನ್ನ ಮೊದಲ ಮೂವರು ಹೆಂಡತಿಯರು ಒಬ್ಬರ ಹಿಂದೊಬ್ಬರು ತೀರಿಕೊಂಡಿದ್ದರಿಂದ ನಾಲ್ಕನೆಯ ಮದುವೆಯಾದ ಗಂಡಸು ಈ ಇಬ್ಬರ ನಡುವೆ ಯಾರು ಹೆಚ್ಚು ಸಭ್ಯರು ಹಾಗೂ ಹೆಚ್ಚು ನೈತಿಕತೆಯುಳ್ಳವರು?

ವಿವಾಹ ವಿಚ್ಛೇದನ ಹಾಗೂ ಅನೈತಿಕ ಸಂಬಂಧಗಳು ಒಂದರ್ಥದಲ್ಲಿ ಸೋತಿವೆ ಎಂಬುದನ್ನು ನಾನು ಅಲ್ಲಗಳೆಯಲಾರೆ. ಗಂಡು-ಹೆಣ್ಣುಗಳ ನಡುವಣ ಸಂಬಂಧದಲ್ಲಿ ಪ್ರಾಯಶಃ ನಾವು ಸಾಧಿಸಬೇಕಾದ ಆದರ್ಶಗಳೆಂದರೆ, ಏಕಪತ್ನಿ ನಿಷ್ಠೆ ಅಥವಾ ಏಕಪತ್ನಿನಿಷ್ಠೆ ಹಾಗೂ ಯಾರ ಒತ್ತಾಯವೂ ಇಲ್ಲದೆ ತಂತಾನೇ ಹುಟ್ಟಿದ ನಿಷ್ಠೆ ಎಂದು ಕಾಣುತ್ತದೆ. ಆದರೆ ಮಾನವ ಬದುಕಿನ ಇತರ ವಲಯಗಳಲ್ಲಾಗುವಂತೆ, ಇಲ್ಲೂ ಕೂಡ ಗಂಡು ಅಥವಾ ಹೆಣ್ಣು ಪರಿಪೂರ್ಣತೆ ಸಾಧಿಸಲು ಹೆಣಗಾಡಿದಾಗ ಅನೇಕ ಸಲ ಆ ಮಟ್ಟ ತಲುಪುವುದು ಅಸಾಧ್ಯವಾಗಬಹುದು.

ಹಾಗಾದರೆ ನಾವು ಮಾಡಬೇಕಾದ್ದೇನು? ವಿವಾಹದ ಚೌಕಟ್ಟಿನೊಳಗೇ ಹುಟ್ಟಿದ ಅರ್ಧ ಡಜನ್ ತಂಟೆಕೋರ ಮಕ್ಕಳಿಗಿಂತ ವಿವಾಹದ ಚೌಕಟ್ಟಿನಾಚೆಗೆ ಹುಟ್ಟಿದ ಒಂದು ಮಗು ಎಷ್ಟೋ ಪಾಲು ಸಭ್ಯವಾಗಿರುತ್ತದೆನ್ನುವುದರಲ್ಲಿ ನನಗಂತೂ ಅನುಮಾನವಿಲ್ಲ. ಹಾಗೆಯೇ ಈ ಹಿಂದೆ ಉಲ್ಲೇಖಿಸಿದ ಮೂವರು ಗಂಡಂದಿರು ಅಥವಾ ಹೆಂಡತಿಯರ ಸಾವು ಕೇವಲ ಆಕಸ್ಮಿಕವಾಗಿರಲಾರದು ಎಂಬುದು ಕೂಡ ಗ್ಯಾರಂಟಿ. ನಿರ್ಲಕ್ಷ್ಯ ಹಾಗೂ ಬಡತನ ಕೂಡ ಈ ಸಾವುಗಳಿಗೆ ಕಾರಣವಾಗಿರಬಹುದು. ಮೂವರು ನಾಲ್ಕು ವಿಚ್ಛೇದನಗಳಿಗೆ ಕಾರಣವಾದ ಘರ್ಷಣೆಗಳಿಗಿಂತ ಈ ಬಗೆಯ ನಿರ್ಲಕ್ಷ್ಯ ಹೆಚ್ಚು ಅನಾಗರಿಕವಾದದ್ದು.

ಇಂದು ಈ ಬಗೆಯ ತೀರ್ಮಾನಗಳಿಗೆ ಹೆಚ್ಚಿನ ಮಹತ್ವ

ಬಂದಿದೆ. ಅದಕ್ಕೆ ಇಂದು ಸಾರ್ವತ್ರಿಕ ಮಹತ್ವವೂ ಬಂದಿದೆ. ಕಾರಣ, ಇವತ್ತು ಯಾವುದನ್ನಾದರೂ ಪಾಪ ಎಂದು ಕರೆಯುವುದಿದ್ದರೆ, ವಿವಾಹ ಹಾಗೂ ವಿವಾಹಾನಂತರದ ಬದುಕಿಗೆ ಸಂಬಂಧಿಸಿದ ಸ್ಥಿತಿಗಳನ್ನು ಹಾಗೆ ಕರೆಯಬಹುದು. ಇವತ್ತು ವರದಕ್ಷಿಣೆಯಿಲ್ಲದ ಹುಡುಗಿಯೆಂದರೆ ಗೊಡ್ಡು ಹಸುವಿನಂತೆ ಯಾವ ಕೆಲಸಕ್ಕೂ ಬಾರದವಳು ಎಂಬಂತಾಗಿ ಬಿಟ್ಟಿದೆ.

ವರದಕ್ಷಿಣೆಯ ಮೊತ್ತವನ್ನು ಪೂರ್ತಿ ಕೊಡದೇ ಹೋದದ್ದರಿಂದ, ತಮ್ಮ ಹೆಣ್ಣು ಮಕ್ಕಳನ್ನು ಅದೆಷ್ಟು ಹಿಂಸಿಸಲಾಗುತ್ತದೆ. ಎಷ್ಟೋ ಸಲ ಸಾವಿಗೂ ದೂಡಲಾಗುತ್ತದೆ ಎಂಬುದನ್ನು ಕುರಿತ ಕತೆಗಳನ್ನು ಎಷ್ಟೋ ಜನ ತಂದೆತಾಯಿಯರು ನನ್ನೊಡನೆ ಹೇಳುತ್ತಾ ಕಣ್ಣೀರಿಟ್ಟಿದ್ದಾರೆ. ವ್ಯವಸಾಯ ಕ್ಷೇತ್ರದಲ್ಲಾಗುವಂತೆ ಇಲ್ಲೂ ಆಗಿಬಿಟ್ಟಿದೆ. ಅಂದರೆ, ದುಡಿಯುವುದಕ್ಕಿಂತ ಜಮೀನನ್ನು ಬಾಡಿಗೆಗೆ ಕೊಟ್ಟರೆ ಹೆಚ್ಚು ಗಳಿಸುವ ರೈತನಂತೆ, ಇಲ್ಲಿ ಕೂಡ ಹೆಚ್ಚು ಓದದ ಹುಡುಗಿಗಿಂತ ಮೇಲೆನಿಸಿ ಬಿಟ್ಟಿದ್ದಾಳೆ. ಅದಕ್ಕೆ ಮುಖ್ಯ ಕಾರಣವೆಂದರೆ ಓದದ ಹುಡುಗಿ ಕೊಡಬೇಕಾದ ವರದಕ್ಷಿಣೆಯ ಮೊತ್ತವೂ ಕಡಿಮೆ ಎನ್ನುವುದು.

ಇಂದು ಭಾರತ ವಿಕೃತಗೊಂಡಿದೆ. ಕಾಮಕ್ಕೆ ಸಂಬಂಧಿಸಿದಂತೆ ಭಾರತೀಯರು ಎಷ್ಟೆಲ್ಲ ಪಾವಿತ್ರ್ಯದ ಮಾತಾಡಿದರೂ ಮದುವೆ ಹಾಗೂ ಕಾಮ ಕುರಿತು ವಿಚಾರಗಳಲ್ಲಿ ಮಾತ್ರ ಅವರು ಅತ್ಯಂತ ಕೊಳಕರಾಗಿಯೇ ಉಳಿದಿದ್ದಾರೆ.

ವರದಕ್ಷಿಣೆ ಕೊಡುವುದು ಹಾಗೂ ತೆಗೆದುಕೊಳ್ಳುವುದು ಶಿಕ್ಷಾರ್ಹ ಅಪರಾಧವಾಗಬೇಕು. ಆದರೆ ಅದರ ಜೊತೆಗೆ ಭಾರತೀಯ ಮನಸ್ಸು ಹಾಗೂ ಮೌಲ್ಯಗಳ ಕೂಡ ಬದಲಾಗಬೇಕು. ಒಂದು ಫೋಟೋ ನೋಡಿಯೋ, ಅಥವಾ ತಲೆತುಂಬ ಸೆರಗುಹೊದ್ದ ಹುಡುಗಿಯೊಬ್ಬಳು ನಡುಗುತ್ತಾ ಚಹ ಕೊಡುವ ಭಯಮಿಶ್ರಿತ ವಾತಾವರಣದಲ್ಲೋ ನಿರ್ಧರಿಸಲಾದ ಇವತ್ತಿನ ಮದುವೆಗಳು ಹಿಂದಿನ ಕಾಲದಲ್ಲಿ ಕ್ಷೌರಿಕ ಅಥವಾ ಬ್ರಾಹ್ಮಣ ನಡೆಸಿಕೊಡುತ್ತಿದ್ದ ಮದುವೆಗಳಿಗಿಂತ ಹೆಚ್ಚು ಹಾಸ್ಯಾಸ್ಪದವಾಗಿವೆ. ಕೊಳ್ಳುವವನೆದುರು ಕುದುರೆಯನ್ನು ತಂದು ನಿಲ್ಲಿಸಿದರೂ ಅದರ ಗೊರಸುಗಳನ್ನು ಮುಟ್ಟಿನೋಡದೆ ಅಥವಾ ಅದರ ಹಲ್ಲುಗಳನ್ನು ಪರೀಕ್ಷಿಸದೇ ಕೊಂಡ ಹಾಗೆ - ಈ ಮದುವೆಗಳು ಕೂಡ.

ಹೀಗಾಗಿ ಇವತ್ತು ನಡುದಾರಿಯ ತಂಗುದಾಣಗಳಿಲ್ಲ. ಭಾರತ ತನ್ನ ಪ್ರಾಚೀನ ಕಸುವನ್ನು ಮರಳಿಗಳಿಸಲೇಬೇಕಾಗಿದೆ. ಅದನ್ನೇ ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಭಾರತ ಆಧುನಿಕವಾಗಲೇಬೇಕಾಗಿದೆ.

• ತಮ್ಮ ಮಗಳನ್ನು ಮದುವೆಮಾಡಿಕೊಡುವುದು ತಂದೆ ತಾಯಿಗಳ ಹೊಣೆಯೇನಲ್ಲ. ಅವಳಿಗೆ ಒಳ್ಳೆಯ ಶಿಕ್ಷಣ ಕೊಡಿಸಿ, ಸಾಕಷ್ಟು ಆರೋಗ್ಯವಾಗಿರುವಂತೆ ನೋಡಿಕೊಳ್ಳುವುದಷ್ಟೇ ಅವರ ಹೊಣೆ. ಒಂದು ವೇಳೆ ಹುಡುಗಿಯೊಬ್ಬಳು ತನ್ನ ಇಷ್ಟದಂತೆ ನಡೆದುಕೊಂಡರೆ, ಇಷ್ಟಬಂದವನ ಜೊತೆ ಓಡಿಹೋದರೆ, ಅಥವಾ ಅನೈತಿಕ ಸಂಬಂಧ ಹೊಂದಿದರೆ, ಅದು ಗಂಡು-ಹೆಣ್ಣಿನ ನಡುವಣ ಸಹಜ ಸಂಬಂಧವನ್ನು ಸ್ಥಾಪಿಸುವ ಒಂದು ಬಗೆಯೇ ಹೊರತು ದೋಷವಲ್ಲ.

ಆದರೆ ಸಮಾಜ ಕ್ರೂರವಾಗಿದೆ. ಸ್ತ್ರೀಯರಂತೂ ಇನ್ನಷ್ಟು ಕ್ರೂರಿಗಳಾಗಬಲ್ಲರು. ಪರಪುರುಷರೊಂದಿಗೆ ಓಡಾಡುವ ಹೆಣ್ಣುಮಕ್ಕಳ ಬಗ್ಗೆ-ಅದರಲ್ಲೂ ಅವಿವಾಹಿತ ಹೆಣ್ಣುಮಕ್ಕಳ ಬಗ್ಗೆ-ವಿವಾಹಿತ ಸ್ತ್ರೀಯರು ಎಷ್ಟು ಕೆಟ್ಟದಾಗಿ ಮಾತಾಡಿಕೊಳ್ಳುತ್ತಾರೆ ಹಾಗೂ ಕ್ಷುದ್ರವಾಗಿ ವರ್ತಿಸುತ್ತಾರೆ ಎಂಬುದನ್ನು ನೋಡಿದರೆ ದುಗುಡವಾಗುತ್ತದೆ. ಇಂಥ ಕ್ರೂರ ಮನಸ್ಸುಗಳಿರುವವರೆಗೆ ಗಂಡು - ಹೆಣ್ಣುಗಳ ನಡುವೆ ಭೇದ ಭಾವ ಮಾಡುವ ಪರಿಪಾಠ ಕೊನೆಗೊಳ್ಳಲಾರದು.

ಸಂತಾನ ನಿಯಂತ್ರಣ, ಜಾತಿಪದ್ಧತಿ ಕುರಿತ ಅಥವಾ ಜಾತಿ ಪದ್ಧತಿಯ ಒತ್ತಡದಿಂದ ಹುಟ್ಟಿದ ವಿಚಾರಗಳನ್ನು ಕುರಿತ ಅಪವಿತ್ರ ಆಲೋಚನೆಗಳಿಂದಾಗಿ ಶ್ರೀ ವಿನೋಬಾ ಭಾವೆ ತಮ್ಮ ಮಹತ್ವದ ಭೂದಾನ ಚಳುವಳಿಯನ್ನೇ ಕಲುಷಿತಗೊಳಿಸುವ ಪ್ರಚೋದನೆಗೊಳಗಾಗಿ ಬಿಟ್ಟಿದ್ದಾರೆ.

ಮೂರು ಮಕ್ಕಳನ್ನು ಹೆತ್ತ ಪ್ರತಿ ತಂದೆ ತಾಯಿಗಳು ಸಂತಾನಹರಣ ಶಸ್ತ್ರ ಚಿಕಿತ್ಸೆ ಮಾಡಿಸಿಕೊಳ್ಳಲೇಬೇಕು. ಸಂತಾನಹರಣ ಮಾಡಿಸಿಕೊಳ್ಳುವ ಅಥವಾ ಸಂತಾನವನ್ನು ತಡೆಗಟ್ಟುವ ಸಲಕರಣೆಗಳು ಪ್ರತಿಯೊಬ್ಬ ಗಂಡು ಹೆಣ್ಣಿಗೂ ದೊರಕುವಂತಿರಬೇಕು. ಅವರು ವಿವಾಹಿತರಿರಲಿ, ಅವಿವಾಹಿತರಿರಲಿ, ಗರ್ಭಧಾರಣೆಯ ತಾಪತ್ರಯ ಬೇಡವೆಂದು ಅವರಿಗನಿಸಿದರೆ ಅಂಥವರಿಗೆ ಈ ಸಾಧನಗಳು ದಕ್ಕುವಂತಿರಬೇಕು.

ಸಾಮಾನ್ಯವಾಗಿ ಬ್ರಹ್ಮಚರ್ಯವೆಂದರೆ ಒಂದು ಸೆರಮನೆಯೇ. ತಮ್ಮ ಬ್ರಹ್ಮಚರ್ಯ ಹಾಗೂ ಕನ್ಯತ್ವಗಳ ಸಂಕೋಲೆಗಳಲ್ಲಿ ಸಿಕ್ಕಿಹಾಕಿಕೊಂಡು ತಮ್ಮ ವಿಮೋಚಕನಿಗಾಗಿ ಕಾಯುತ್ತಿರುವ ಇಂಥ ಸೆರೆಮನೆವಾಸಿಗಳನ್ನು ಯಾರು ತಾನೆ ಕಂಡಿಲ್ಲ?

ಇಂಥ ಸೆರೆಮನೆಯಲ್ಲಿ ಸಿಕ್ಕಿಕೊಂಡ ಅಸ್ಖಲಿತ ಬ್ರಹ್ಮಚಾರಿ ಜೆ.ಸಿ. ಕುಮಾರಪ್ಪನವರ ಈಚಿನ ಮಾತುಗಳಲ್ಲಿ ಅವರ ಮನಸ್ಥಿತಿ ವ್ಯಕ್ತವಾಗಿರುವ ಬಗೆ ಗಮನಿಸಿ. ರಷ್ಯನ್

ಹುಡುಗ-ಹುಡುಗಿಯರು ಪ್ರತ್ಯೇಕ ಗುಂಪುಗಳಲ್ಲಿ ಅಡ್ಡಾಡುತ್ತಿದ್ದರೆಂದು ಹೊಗಳಿದ ಕುಮಾರಪ್ಪನವರಿಗೆ ಪ್ರಾಯಶಃ ಅವರು ಸಾಮೂಹಿಕ ಪ್ರೇಮದಲ್ಲಿ ತೊಡಗಿದ್ದಿರಬಹುದೆಂಬುದು ಅರಿವಿಗೆ ಬರಲೇ ಇಲ್ಲವೇನೋ? ಆದರೆ ಕುಮಾರಪ್ಪ ತಮ್ಮ ಈ ಮಾತುಗಳ ಮೂಲಕ ತಾವೊಬ್ಬ ಆತ್ಮವಿಮೋಚಕನಿಗಾಗಿ ಕಾಯುತ್ತಿರುವುದನ್ನು ಅಪ್ರಜ್ಞಾಪೂರ್ವಕವಾಗಿ ಸೂಚಿಸುತ್ತಿದ್ದಾರಲ್ಲವೆ?

ಲೈಂಗಿಕ ಮೌಲ್ಯಗಳನ್ನು ಕುರಿತ ಇಂಥ ಕ್ಷುದ್ರ ಸಂಗತಿಗಳ ವಿರುದ್ಧ ತರುಣ ತರುಣಿಯರು ಬಂಡೇಳಲು ಇದು ಸಕಾಲ. ಲೈಂಗಿಕ ನೀತಿ ಸಂಹಿತೆಯಲ್ಲಿ ಎರಡೇ ಎರಡು ಅಕ್ಷಮ್ಯ ಅಪರಾಧಗಳಿವೆ ಎಂಬುದು ಮಾತ್ರ ಅವರಿಗೆ ನೆನಪಿರಲಿ : ಒಂದು, ಅತ್ಯಾಚಾರ. ಎರಡು, ಸುಳ್ಳು ಹೇಳುವುದು ಅಥವಾ ಕೊಟ್ಟ ಮಾತಿಗೆ ತಪ್ಪುವುದು. ಮೂರನೆಯ ಅಪರಾಧವೂ ಒಂದಿದೆ. ಅದೆಂದರೆ ಇನ್ನೊಬ್ಬರಿಗೆ ನೋವುಂಟು ಮಾಡುವುದು. ಈ ಕುರಿತು ಸಾಧ್ಯವಾದಷ್ಟು ಅವರು ಎಚ್ಚರವಹಿಸಬೇಕು.

ಬದುಕು ಎಷ್ಟೊಂದು ಅಸಹನೀಯವಾಗಿಬಿಟ್ಟಿದೆಯೆಂದರೆ, ಇವತ್ತು ಸಮಾಜದ ಮುಂಚೂಣಿಯಲ್ಲಿರುವವರು ಬರೀ ಲಗ್ನಪತ್ರಿಕೆಗಾಗಿ ಐವತ್ತು ಸಾವಿರ ಖರ್ಚು ಮಾಡುತ್ತಾರೆ. ಮದುವೆಯಾಗಲಿರುವ ಎರಡು ಜೀವಗಳು ಸಾಧಿಸಬೇಕಾದ ಆತ್ಮಗಳ ಮಿಲನದಲ್ಲಿ ವ್ಯಕ್ತವಾಗಬೇಕಾದ ಒಂದು ವಿವಾಹದ ಘನತೆ ಹಾಗು ವೈಭವ ಇಪ್ಪತ್ತು ಲಕ್ಷರೂಪಾಯಿಗಳ ನೆಕ್‌ಲೇಸಿನಲ್ಲೋ, ಐವತ್ತು ಸಾವಿರದ ಸೀರೆಗಳಲ್ಲೋ ವ್ಯಕ್ತವಾಗುತ್ತಿದೆ.

ಒಂದು ಚಹಾ ಕೂಟದಲ್ಲಿ ಇಂಥ ಲಕ್ಷಾಧೀಶನೊಬ್ಬ ಆಕಸ್ಮಿಕವಾಗಿ ನನಗೆ ಎದುರಾಗಿ, 'ಅಂತ ಸೀರೆಗಳೇ ಇರುವುದಿಲ್ಲವಲ್ಲ', ಎಂದು ಹಮ್ಮಿನಿಂದ ಹೇಳಿದ. ಅವನನ್ನು ಯಾವುದಾದರೂ ಶಿಶುವಿಹಾರಕ್ಕೆ ಕಳಿಸಬೇಕೆನಿಸಿತು. ಈ ವ್ಯಕ್ತಿಯನ್ನು ಹಿಂದೆ ನಾನು ಭೇಟಿಮಾಡಿದ್ದು ಒಂದೇ ಒಂದು ಸಲ. ಅದಾದದ್ದು ಕೆಲವರ್ಷಗಳ ಹಿಂದೆ. ಅವತ್ತು ಈ ವ್ಯಕ್ತಿ ಎರಡು ಗಂಟೆಗಳ ಕಾಲ ನನ್ನನ್ನು ಹೊಗಳಿ ಉಬ್ಬಿಸಲು ಪ್ರಯತ್ನಿಸಿದ್ದ. ಕಾರಣ, ತುಂಟನೊಬ್ಬ ಇವನಿಗೆ ಫೋನ್ ಮಾಡಿ ಕಾಳದಂಧೆಗಳನ್ನು ನಡೆಸುತ್ತಿರುವ ಇವನ ಫ್ಯಾಕ್ಟರಿಯನ್ನು ನಮ್ಮ ಪಾರ್ಟಿಯ ಸದಸ್ಯರು ಸುಟ್ಟು ಹಾಕುತ್ತಾರೆಂದು ಹೇಳಿದ್ದರಂತೆ. ಈ ಹಿನ್ನೆಲೆಯಲ್ಲಿ ನನ್ನನ್ನು ಪ್ರಸನ್ನಗೊಳಿಸಲೆತ್ನಿಸುತ್ತ ಪಾರ್ಟಿ ಫಂಡಿಗೆ ಅಷ್ಟಿಷ್ಟು ಕೊಡಬಲ್ಲೆನೆಂದು ಹೇಳುವ ಧಾರ್ಷ್ಟ್ಯವನ್ನೂ ಅವನು ತೋರಿದ. ಆದರೆ ನಾನು ಅವನ ಅವ್ಯವಹಾರಗಳನ್ನು ಮುಚ್ಚಿ ಹಾಕಲು ಹಣ ತೆಗೆದುಕೊಳ್ಳುವಷ್ಟು ದುರುಳನಾಗಿರದ್ದರಿಂದ ಮತ್ತೆ ಅವನೆಂದೂ ತನ್ನ ಉದಾರ ಬುದ್ಧಿಯನ್ನು ಪ್ರದರ್ಶಿಸಲಿಲ್ಲ.

ಇಂಥ ಸಂದರ್ಭಗಳಲ್ಲೇ ಬಾಂಬು ಅಥವಾ ಆಸಿಡ್ ಬಲ್ಬ್ ಬಳಸುವ ಕುರುಡು ಪ್ರಚೋದನೆ ಹುಟ್ಟುವುದು ಎಂದು ಕಾಣುತ್ತದೆ.

ಸಂಸ್ಕೃತಿಯಲ್ಲಿ ಹೆಸರಿನಲ್ಲಿ ನಡೆಯುವ ಕೊಳಕು ಕೆಲಸಗಳನ್ನೆಲ್ಲ ಕಾಯ್ದುಕೊಂಡು ಹೋಗಲು ರಾಜಕಾರಣ, ಧರ್ಮ, ವ್ಯಾಪಾರ ಹಾಗೂ ಪ್ರಚಾರಗಳು ಸಂಚು ಮಾಡುತ್ತಲೇ ಇರುತ್ತವೆ. ಅಪಕೀರ್ತಿ ಹಾಗೂ ಸಾವು ಎರಡನ್ನೂ ತರಬಲ್ಲ ಭಯಾನಕ ಶಕ್ತಿ ಈ ಯಥಾಸ್ಥಿತಿವಾದಿ ಸಂಚುಗಳಿಗಿದೆ. ನಾನು ಹೀಗೆಲ್ಲ ಬರೆದದ್ದಕ್ಕಾಗಿ ನೇರವಾದ ಅಥವಾ ತಕ್ಷಣದ ಪ್ರತಿಕ್ರಿಯೆ ಬಾರದಿರಬಹುದು. ಆದರೆ ಎಂದಾದರೊವ್ಮೆ ನಾನು ಉಗ್ರವಾದ ಪ್ರತೀಕಾರ ಎದುರಿಸಬೇಕಾಗುತ್ತದೆ ಎಂಬುದು ಖಚಿತವಾಗಿ ಗೊತ್ತು.

ತರುಣ, ತರುಣಿಯರು ತಮ್ಮ ಪ್ರಾಮಾಣಿಕತೆಯ ಕಾರಣದಿಂದಾಗಿಯೇ ಅಪಖ್ಯಾತಿಗೊಳಗಾದಾಗ ಒಂದು ಮಾತನ್ನು ನೆನಪಿನಲ್ಲಿಡಬೇಕು : ಕೆಸರು ರಾಡಿಯನ್ನೆಲ್ಲ ತೆಗೆದು, ಮತ್ತೆ ನೀರು ಸರಾಗವಾಗಿ ಹರಿಯುವಂತೆ ಮಾಡಲು ಅವರು ಅನಿವಾರ್ಯವಾಗಿ ತೆರಬೇಕಾದ ಬೆಲೆ ಇದು.

ಜಾತಿ ಹಾಗೂ ಲಿಂಗಗಳನ್ನು ಕುರಿತಂತೆ ಇರುವ ಅಸಹ್ಯಕರವಾದ ಪ್ರತ್ಯೇಕತೆಗಳನ್ನು ನಿರ್ನಾಮಗೊಳಿಸುವುದಕ್ಕಿಂತ ಮಿಗಿಲಾದ ಸತ್ಕಾರ್ಯ ಇವತ್ತು ಯಾವುದೂ ಇಲ್ಲ. ಈ ದಿಸೆಯಲ್ಲಿ ತೀರಾ ಒರಟಾಗಿರಬಾರದು ಹಾಗೂ ಇತರರಿಗೆ ನೋವುಂಟು ಮಾಡಬಾರದು ಎಂಬ ಎಚ್ಚರ ಮಾತ್ರ ಸದಾ ಇರಲಿ. ಕಾರಣ, ಗಂಡು-ಹೆಣ್ಣುಗಳ ನಡುವಣ ಸಂಬಂಧದಲ್ಲಿ ಅತಿಸೂಕ್ಷ್ಮವಾದ ಎಳೆಗಳಿವೆ. ಆ ಬಗೆಯ ಎಚ್ಚರವನ್ನು ಸದಾ ಕಾಯ್ದುಕೊಳ್ಳುವುದು ಸಾಧ್ಯವಾಗದಿರಬಹುದು. ಆದರೆ ಪ್ರಯತ್ನ ಮಾತ್ರ ಎಂದೆಂದಿಗೂ ನಿಲ್ಲದಿರಲಿ. ಅದಕ್ಕಿಂತ ಮಿಗಿಲಾಗಿ ಈ ದಟ್ಟ ನಿರಾಶೆಯನ್ನು ಚದುರಿಸಿ, ಸಂತಸದ ಗಳಿಗೆಗಳನ್ನು ಸೃಷ್ಟಿಸುವ ಸಾಹಸಕ್ಕೆ ಎಲ್ಲರೂ ಧುಮುಕಲಿ.

*(1953, ಜನವರಿ)*

*(ಲೋಹಿಯಾ ಅವರ 'ದಿ ಕಾಸ್ಟ್ ಸಿಸ್ಟಮ್' ಪುಸ್ತಕದ ಮೊದಲನೆಯ ಅಧ್ಯಾಯ)*

## ನಿಮಗೆ ಗೊತ್ತೆ 'ಸ್ತ್ರೀ ಶಕ್ತಿ'ಯ ಅಗಾಧತೆ

### ಸಶಕ್ತ ಸ್ವಾವಲಂಬಿ ಮಹಿಳಾ ಸಂಘಟನೆಗೆ ರುವಾರಿ

ಹೌದು ! ಕರ್ನಾಟಕ ಸರ್ಕಾರದ ಈ ಕ್ರಾಂತಿ ಯೋಜನೆ ಇಡೀ ರಾಷ್ಟ್ರಕ್ಕೆ ಬಹುದೊಡ್ಡ ಮಾದರಿ. ಗ್ರಾಮೀಣ ಮಹಿಳೆಯರಲ್ಲಿ ಆತ್ಮ ವಿಶ್ವಾಸ, ಆರ್ಥಿಕ ಸ್ಥಿರತೆ ಮತ್ತು ಆದಾಯ ತರುವ ಚಟುವಟಿಕೆಗಳಿಗೆ ನಾಂದಿ ಹಾಡುವ ಈ ಯೋಜನೆಯು ಮಹಿಳೆಯರ ಸರ್ವಾಂಗೀಣ ಅಭಿವೃದ್ಧಿ ಸಾಧಿಸುತ್ತಾ ಸರ್ವಮಾನ್ಯವಾಗಿದೆ.

- ಕರ್ನಾಟಕದಾದ್ಯಂತ 11.04 ಲಕ್ಷ ಮಹಿಳೆಯರನ್ನೊಳಗೊಂಡ 77,660 ಸ್ವ-ಸಹಾಯ ಗುಂಪುಗಳು ಕಾರ್ಯನಿರತ
- 70,007 ಗುಂಪುಗಳು ಬ್ಯಾಂಕ್ ಖಾತೆಗಳನ್ನು ಪಡೆದು 79.24 ಕೋಟಿ ರೂಪಾಯಿಗಳ ಉಳಿತಾಯ ಸಾಧನೆ
- ಜನರ ಬೆಂಬಲ ಹಾಗೂ ಸಹಭಾಗಿತ್ವದಿಂದಾಗಿ, ಸ್ತ್ರೀ ಶಕ್ತಿ ಸ್ವ-ಸಹಾಯ ಗುಂಪುಗಳು ಸಮಾಜದ ಸರ್ವತೋಮುಖ ಅಭ್ಯುದಯಕ್ಕಾಗಿ ಹಲವಾರು ರೀತಿಯಲ್ಲಿ ಕೊಡುಗೆ ಸಲ್ಲಿಸುತ್ತಿದೆ
- ಈಗಾಗಲೇ ರಚನೆಯಾಗಿರುವ ಸ್ವ-ಸಹಾಯ ಗುಂಪುಗಳನ್ನು ಬಲಪಡಿಸುವುದಕ್ಕೆ ಹೆಚ್ಚಿನ ಒತ್ತನ್ನು ನೀಡಲಾಗುತ್ತಿದೆ.

**ಯೋಜನೆಯ ರೂಪುರೇಷೆಗಳು**

- ಬಡತನ ರೇಖೆಯ ಕೆಳಗೆ ಬದುಕುತ್ತಿರುವ, ಸಮಾನ ಮನಸ್ಕ 15-20 ಮಹಿಳೆಯರು ಸೇರಿ ತಮ್ಮ ಆರ್ಥಿಕ ಅಭಿವೃದ್ಧಿಗಾಗಿ ಸ್ವ ಇಚ್ಛೆಯಿಂದ ರಚಿಸಿಕೊಂಡ ಗುಂಪೇ - ಸ್ವಸಹಾಯ ಗುಂಪು.
- ಪ್ರತಿಯೊಂದು ತಾಲ್ಲೂಕಿನ ಗ್ರಾಮೀಣ ಪ್ರದೇಶಗಳಲ್ಲಿ ಅಂಗನವಾಡಿ ಕಾರ್ಯಕರ್ತೆಯರ ಮೂಲಕ ಸ್ವಸಹಾಯ ಗುಂಪುಗಳ ರಚನೆ

**ಅರ್ಹತೆ**

- ಬಡತನ ರೇಖೆಗಿಂತ ಕೆಳಗೆ ಬದುಕುತ್ತಿರುವ ಗ್ರಾಮೀಣ ಮಹಿಳೆಯರಿಗೆ ಆದ್ಯತೆ
- ಭೂರಹಿತ ಮಹಿಳಾ ಕೃಷಿ ಕಾರ್ಮಿಕರು, ಪರಿಶಿಷ್ಟ ಜಾತಿ ಅಥವಾ ವರ್ಗಕ್ಕೆ ಸೇರಿದ ಕುಟುಂಬದವರು, ಕುಡಿತಕ್ಕೆ ಬಲಿಯಾದ ಅಥವಾ ಅಂಗವಿಕಲ ವ್ಯಕ್ತಿ ಇರುವ ಕುಟುಂಬದ ಮಹಿಳೆಯರಿಗೆ ಆದ್ಯತೆ.
- ಸ್ವಸಹಾಯ ಗುಂಪುಗಳು ತಮ್ಮ ಚಟುವಟಿಕೆಗಳನ್ನು ನಡೆಸಲು ಪ್ರಾರಂಭದಲ್ಲಿ ಅಂಗನವಾಡಿ ಕಾರ್ಯಕರ್ತೆಯರು ಮಾರ್ಗದರ್ಶನ ನೀಡುತ್ತಾರೆ. ನಂತರ ಮೇಲುಸ್ತುವಾರಿಯನ್ನು ಸ್ವಸಹಾಯ ಗುಂಪುಗಳೇ ನೋಡಿಕೊಳ್ಳುವವು.

**ಯೋಜನೆಯ ಧ್ಯೇಯೋದ್ದೇಶ**

- ರಾಜ್ಯದ ಎಲ್ಲಾ 176 ತಾಲ್ಲೂಕುಗಳಲ್ಲಿರುವ ಗ್ರಾಮಾಂತರ ಪ್ರದೇಶಗಳಲ್ಲಿ, ಒಂದು ಲಕ್ಷ ಸ್ವಸಹಾಯ ಗುಂಪುಗಳ ಮುಖಾಂತರ ಸುಮಾರು 20 ಲಕ್ಷ ಮಹಿಳೆಯರ ಸಂಘಟನೆ.
- ಮಹಿಳೆಯರಿಗೆ ಆರ್ಥಿಕ ಪ್ರಗತಿಯ ಮೂಲಕ ಸಾಮಾಜಿಕ ಬದಲಾವಣೆಗೆ ಸೂಕ್ತ ವಾತಾವರಣವನ್ನು ಕಲ್ಪಿಸುವುದು.
- ಆದಾಯೋತ್ಪನ್ನ ಚಟುವಟಿಕೆಗಳಲ್ಲಿ ಮಹಿಳೆಯರನ್ನು ತೊಡಗಿಸುವುದರ ಮೂಲಕ ಬಡತನ ರೇಖೆಯ ಕೆಳಗೆ ಬದುಕುತ್ತಿರುವ ಮಹಿಳೆಯರ ಆದಾಯವನ್ನು ಹೆಚ್ಚಿಸಿ, ಅವರಲ್ಲಿ ಆರ್ಥಿಕ ಸ್ಥಿರತೆಯನ್ನು ಮೂಡಿಸುವುದು, ತನ್ಮೂಲಕ ಸ್ವಾವಲಂಬಿಗಳನ್ನಾಗಿ ಮಾಡುವುದು.
- ವಿವಿಧ ಇಲಾಖೆಗಳನ್ನು ಒಮ್ಮುಖಗೊಳಿಸುವುದರ ಮೂಲಕ ಸ್ವಸಹಾಯ ಗುಂಪುಗಳಿಗೆ ಅಭಿವೃದ್ಧಿ ಕಾರ್ಯಕ್ರಮಗಳ ಫಲ ದೊರೆಯುವಂತೆ ಅವಕಾಶ ಕಲ್ಪಿಸುವುದು ಹಾಗೂ ಸಾಲ ನೀಡುವ ಸಂಸ್ಥೆಗಳಿಗೆ ಸಾಮೀಪ್ಯ ಒದಗಿಸುವುದು.

**'ಸ್ತ್ರೀ ಶಕ್ತಿ' - ಯೋಜನೆಯ ಸದುಪಯೋಗ ಪಡೆದುಕೊಳ್ಳಿ! ನೀವಿನ್ನೂ 'ಸ್ತ್ರೀ ಶಕ್ತಿ' ಯೋಜನೆಗೆ ಸೇರಿಲ್ಲವೆ? ಇಂದೇ ಸೇರಿ. ಸ್ವಸಹಾಯ ಗುಂಪಿನ ಸದಸ್ಯರಾಗಿ.**

**'ಸ್ತ್ರೀ ಶಕ್ತಿ' - ಗ್ರಾಮೀಣ ಮಹಿಳೆಯರ ಸರ್ವತೋಮುಖ ಅಭಿವೃದ್ಧಿಯ ತಾರಕ ಮಂತ್ರ.**

**- ಕರ್ನಾಟಕ ವಾರ್ತೆ**

# 'ಸಮನ್ವಯ' ಮಹಿಳಾ ಪರಸಂಘಟನೆಯ ಮಂಜುಳ ಆದಿಕೇಶವ ಅವರ ಸಾವಿಗೆ ಕಾರಣರವಾದ ಘಟನೆಯನ್ನು ಪ್ರತಿಭಟಿಸುತ್ತಾ ನೀಡಿರುವ ಪತ್ರಿಕಾ ಹೇಳಿಕೆ

ರಾಜ್ಯದ ರಾಜಧಾನಿಯಿಂದ ಕೇವಲ 40 ಕಿ.ಮೀ. ದೂರದಲ್ಲಿರುವ ಆನೇಕಲ್ಲಿನ ಪುರಸಭಾಧ್ಯಕ್ಷೆ ಮಂಜುಳಾ ಆದಿಕೇಶವರವರು ಆತ್ಮಹತ್ಯೆ ಮಾಡಿಕೊಂಡು ಈಗಾಗಲೇ 12 ದಿನಗಳು ಕಳೆದಿವೆ. ತನ್ನ ಸಾವಿಗೆ ಕಾರಣರಾದವರನ್ನು ಯಾರೆಂದು ತಿಳಿಸಿ ಅವರಿಗೆ ಶಿಕ್ಷೆಯಾಗಬೇಕೆಂದು ಜಿಲ್ಲಾಧಿಕಾರಿಗಳಿಗೆ ಅವರು ಬರೆದಿಟ್ಟಿರುವ ಮರಣ ಪತ್ರವು ದೊರಕಿದೆ. ಇಷ್ಟಾಗಿಯೂ ಇದುವರೆವಿಗೂ ಪೋಲಿಸರು ಯಾರನ್ನೂ ಬಂಧಿಸಿಲ್ಲ

ಆನೇಕಲ್ಲಿನ ಬಿ.ಜೆ.ಪಿ. ಶಾಸಕರಾದ ಎ. ನಾರಾಯಣಸ್ವಾಮಿ ಮತ್ತವರ ಬೆಂಬಲಿಗರ ಹೆಸರನ್ನು ಸ್ಪಷ್ಟವಾಗಿ ಮಂಜುಳಾರವರು ಉಲ್ಲೇಖಿಸಿದ್ದಾರೆ. ಜನ ರಕ್ಷಕರು ಪ್ರಾಣ ಭಕ್ಷರಾದಾಗ ಅವರನ್ನು ತಕ್ಷಣ ಬಂಧಿಸಿ ಕಾನೂನುರೀತ್ಯಾ ಕ್ರಮಕೈಗೊಂಡು ಕಾನೂನು ಎಲ್ಲರಿಗಿಂತ ದೊಡ್ಡದೆಂದು ಸಾಬೀತು ಪಡಿಸುವ ಬದಲು ಸದರಿ ಪ್ರಕರಣದ ಮುಖ್ಯ ಹೊಣೆಗಾರರು ವಿಧಾನಸಭಾ ಸದಸ್ಯರಾಗಿರುವ ಹಿನ್ನೆಲೆಯಲ್ಲಿ ವಿಧಾನಸಭಾಧ್ಯಕ್ಷರ ಅನುಮತಿ ಕೋರಿ ಪತ್ರ ಬರೆದಿದ್ದೇವೆ ಎಂದು ಪೋಲಿಸ್ ಅಧಿಕಾರಿಗಳು ಪತ್ರಿಕಾ ಹೇಳಿಕೆ ಕೊಟ್ಟಿದ್ದಾರೆ. ಸಮನ್ವಯ ಈ ಕುರಿತು ಸಭಾಧ್ಯಕ್ಷರನ್ನು ಭೇಟಿ ಮಾಡಿ ಅನುಮತಿ ಕೊಡಬೇಕೆಂದು ಮನವಿ ಮಾಡಿದಾಗ, ಸಭಾಧ್ಯಕ್ಷರು ವಿಧಾನಸಭೆ, ಶಾಸಕರ ಭವನಗಳಿಂದಾಚೆ ಶಾಸಕರನ್ನು ಬಂಧಿಸಲು ಯಾವುದೇ ಅನುಮತಿಯ ಅಗತ್ಯವಿಲ್ಲವೆಂದು ಸ್ಪಷ್ಟಪಡಿಸಿದ್ದಾರೆ. ಆನೇಕಲ್ಲಿನ ಪ್ರಥಮ ಪ್ರಜೆಯ ಸಾವಿಗೆ ಕಾರಣರಾದ ಸ್ಥಳೀಯ ಬಿ.ಜೆ.ಪಿ. ಶಾಸಕರು ಮತ್ತವರ ಬೆಂಬಲಿಗರನ್ನು ಬಂಧಿಸಲು ಅಸಮರ್ಥರಾದ ಪೋಲಿಸರು ಈ ರೀತಿಯ ಸುಳ್ಳು ಮಾಹಿತಿಗಳನ್ನು ನೀಡಿ ಜನರನ್ನು ತಪ್ಪುದಾರಿಗೆಳೆಯುತ್ತಿದ್ದಾರೆ. ಇದನ್ನು ನಾವು ಖಂಡಿಸುತ್ತೇವೆ ಮತ್ತು ಕೊಲೆಗಾರರು ಯಾರೆಂದು ಗೊತ್ತಾದಾಗ್ಯೂ ಇದುವರೆಗೂ ಬಂಧಿಸದಿರುವ ವಿಳಂಬನೀತಿಗೆ ಕಾರಣವನ್ನು ತಿಳಿಯಬಯಸುತ್ತೇವೆ. ಇದೇ ಸಂದರ್ಭದಲ್ಲಿ ಪೋಲಿಸ್ ಇಲಾಖೆ ಮಾಹಿತಿ ನೀಡುತ್ತಿರುವಂತೆ ತಲೆ ತಪ್ಪಿಸಿಕೊಂಡಿರುವ ಶಾಸಕರು ಮತ್ತವರ ಬೆಂಬಲಿಗರ ನಿರೀಕ್ಷಣಾ ಜಾಮೀನು ಪಡೆಯಲು ತೀವ್ರ ಪ್ರಯತ್ನ ನಡೆಸುತ್ತಿದ್ದಾರೆ. ಇದು ಅವರ ಮೇಲಿನ ಆರೋಪಗಳಿಗೆ ಸ್ಪಷ್ಟಪುರಾವೆ. ಇಂದಿನ ಪತ್ರಿಕೆಗಳಲ್ಲಿ ವರದಿಯಾದಂತೆ ನ್ಯಾಯಾಲಯವು ಅವರಿಗೆ ನಿರೀಕ್ಷಣಾ ಜಾಮೀನನ್ನು ನಿರಾಕರಿಸಿದೆ. ಪ್ರಜಾಪ್ರಭುತ್ವ ಮೌಲ್ಯಗಳನ್ನು ರಕ್ಷಿಸುವ ನಿಟ್ಟಿನಲ್ಲಿ ನ್ಯಾಯಾಲಯದ ಈ ನಿರಾಕರಣೆಯನ್ನು ನಾವು ಸ್ವಾಗತಿಸುತ್ತೇವೆ. ಈ ದಿಸೆಯಲ್ಲಿ ಸರ್ಕಾರ ಹೆಜ್ಜೆ ಮುಂದಿಟ್ಟು ಯಾವುದೇ ಸಾಕ್ಷಾಧಾರಗಳು ಹಾಳಾಗದಂತೆ ಕ್ರಮ ವಹಿಸಿ 'ನ್ಯಾಯ'ದ ಕೈಗಳನ್ನು ಬಲಪಡಿಸಬೇಕೆಂದು ಒತ್ತಾಯಿಸುತ್ತೇವೆ.

ಇಂತಹ ಪ್ರಕರಣಗಳಲ್ಲಿ ನಿಷ್ಪಕ್ಷಪಾತ ತನಿಖೆ ನಡೆಸಿ ಆರೋಪಿಗಳಿಗೆ ಕಠಿಣ ಶಿಕ್ಷೆ ವಿಧಿಸುವ ಮೂಲಕ ಪ್ರಜಾಪ್ರಭುತ್ವ ಮೌಲ್ಯಗಳಿಗೆ ಸಿಗಬೇಕಾದ ಗೌರವವನ್ನು ಉಳಿಸಬೇಕಾಗಿಯೂ ಮತ್ತು ಹಲವು ಹಂತಗಳಲ್ಲಿ ಹೋರಾಟಗಳ ಮೂಲಕ ಮಹಿಳೆಯರು ಪಡೆದುಕೊಂಡ ರಾಜಕೀಯ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುವ ಕ್ರಿಯೆಯಿಂದ ಅವರು ವಿಮುಖರಾಗದಂತೆ ತಡೆಯಲು ಸರ್ಕಾರ ಮುಂದಾಗಬೇಕೆಂದು ನಮ್ಮ ಆಗ್ರಹ. ಸದರಿ ಪ್ರಕರಣದಲ್ಲಿ ಆರೋಪಿಗಳ ಕಡೆಯವರು ಮಂಜುಳಾರ ಕುಟುಂಬಕ್ಕೆ ಮತ್ತು ಅವರಿಗೆ ಸಹಾಯ ನೀಡುವ ಸಂಘಟನೆಗಳು / ಜನರಿಗೆ ಬೆದರಿಕೆಯನ್ನೊಡ್ಡುತ್ತಿರುವುದು ನಮ್ಮ ಗಮನಕ್ಕೆ ಬಂದಿದೆ. ಮಹಿಳೆಯ ಮೇಲಿನ ದೌರ್ಜನ್ಯದ ಇಂತಹ ಪ್ರಕರಣಗಳು ನಡೆದಾಗ ಅನುಸರಿಸುವ ವಿಳಂಬ ನೀತಿಗಳು ದೌರ್ಜನ್ಯಗಳ ಹೆಚ್ಚಳಕ್ಕೆ ಕಾರಣವಾಗುತ್ತದೆ. ಘಟನೆಗೆ ಬಲಿಯಾದವರ ಮೇಲೆ ಆರೋಪಿಗಳ ಒತ್ತಡ ಹೆಚ್ಚಾಗಿ ಸಾಕ್ಷ್ಯಾಧಾರಗಳನ್ನು ನಾಶ ಮಾಡಲು ವಿಪುಲ ಅವಕಾಶಗಳು ದೊರೆಯುತ್ತವೆ. ಕೊನೆಯಲ್ಲಿ ತಪ್ಪಿತಸ್ಥರು ಶಿಕ್ಷೆಯಿಂದ ಪಾರಾಗುತ್ತಾರೆ ಮತ್ತೆ ಮತ್ತೆ ದೌರ್ಜನ್ಯಗಳು ನಡೆಯುತ್ತಲೇ ಇರುತ್ತವೆ. ಇಂತಹ ಘಟನೆಗಳು ನಡೆದಾಗ ಸರ್ಕಾರ ಕೈಗೊಳ್ಳುವ ದಿಟ್ಟ ಹೆಜ್ಜೆಗಳಷ್ಟೆ ಜನರಲ್ಲಿ ವಿಶ್ವಾಸ ಮೂಡಿಸಬಲ್ಲದು. ಅಂತಹ ವಿಶ್ವಾಸ ಮೂಡಿಸುವ ಕೆಲಸವನ್ನು ಸರ್ಕಾರದಿಂದ ನಾವು ನಿರೀಕ್ಷಿಸುತ್ತೇವೆ. ಈ ದಿಸೆಯಲ್ಲಿ ನಮ್ಮ ಮನವಿಯನ್ನು ಪುರಸ್ಕರಿಸಿ ಗೃಹ ಸಚಿವರು ಮಂಜುಳಾರ ಕುಟುಂಬಕ್ಕೆ ಪೋಲಿಸ್ ರಕ್ಷಣೆಯನ್ನು ಒದಗಿಸಿರುವುದನ್ನು ನಾವು ಸ್ವಾಗತಿಸುತ್ತೇವೆ.

ಇದೇ ಸಂದರ್ಭದಲ್ಲಿ ಮಹಿಳೆಯರನ್ನು ಮಾತೆಯರೆಂದು



ನವೆಂಬರ್ 12ರಂದು
ಸಮನ್ವಯ
(ಮಹಿಳಾಪರ ಸಂಘಟನೆಗಳ ಒಕ್ಕೂಟ)ದಿಂದ
ನಡೆದ ಪ್ರತಿಭಟನಾ ಸಭೆ

ಗೌರವಿಸುತ್ತೇವೆಂದು ಜಗತ್ತಿಗೇ ಸಾರುತ್ತಿರುವ ಭಾರತೀಯ ಜನತಾ ಪಕ್ಷದ ತಮ್ಮದೇ ಪಕ್ಷದ ಮಹಿಳೆಗೆ ತಮ್ಮದೇ ಪಕ್ಷದ ಶಾಸಕರಿಂದ ಕಿರುಕುಳ ಅವಮಾನಗಳು ನಡೆಯುತ್ತಿದ್ದಾಗ ಸುಮ್ಮನೆ ಕುಳಿತ್ತಿದ್ದರೇಕೆ? ಈಗ ಆಕೆಯ ಸಾವಿನ ನಂತರವು ಕೂಡ ಕಿವುಡು ಮೂಕರಂತೆ ಮೌನಿಗಳಾಗಿರುವುದು ಯಾಕೆಂದು ಪ್ರಶ್ನಿಸ ಬಯಸುತ್ತೇನೆ. ಪ್ರಜಾಪ್ರಭುತ್ವ ಮೌಲ್ಯಗಳ ಕುರಿತು ಕಿಂಚಿತ್ತಾದರೂ ಗೌರವವಿದ್ದರೆ ತಕ್ಷಣ ತಮ್ಮ ಪಕ್ಷದ ಶಾಸಕರು ಮತ್ತವರ ಬೆಂಬಲಿಗರನ್ನು ಪೋಲಿಸ್ ವಶಕ್ಕೆ ಒಪ್ಪಿಸಿ ತಮ್ಮದೇ ಹೇಳಿಕೆಗಳಿಗೆ ಕುಂದಾಗದಂತೆ ನಡೆಯಬೇಕೆಂದು ಒತ್ತಾಯಿಸುತ್ತೇವೆ.

ಇದೇ ಸಂದರ್ಭದಲ್ಲಿ ಕರ್ನಾಟಕದ ಜನತೆ ಮಹಿಳೆಯರ ಮೇಲೆ ಮನುವಾದಿ ಮಹಿಳಾ ವಿರೋಧಿ ಶಕ್ತಿಗಳು ನಡೆಸುತ್ತಿರುವ ದೌರ್ಜನ್ಯ. ಗೂಂಡಾಗಿರಿಗಳನ್ನು ಒಕ್ಕೊರಲಿನಿಂದ ಪ್ರತಿಭಟಿಸಬೇಕೆಂದು ವಿನಂತಿಸುತ್ತೇವೆ.

**ಅಖಿಲ ಭಾರತ ಜನವಾದಿ ಮಹಿಳಾ ಸಂಘಟನೆ**

**ಸುಮಂಗಲಿ ಸೇವಾ ಆಶ್ರಮ**

**ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ**

**ನ್ಯಾಷನಲ್ ಫೆಡರೇಷನ್ ಆಫ್ ಇಂಡಿಯನ್ ವುಮೆನ್**

**ಯಶಸ್ವಿನಿ ಮಹಿಳಾ ಮಂಡಲದ ಒಕ್ಕೂಟ**

**ದುಡಿಯುವ ಮಹಿಳೆಯರ ಸಮನ್ವಯ ಸಮಿತಿ**

**ಶ್ರೀಸದ್ಗುರು ಸೇವಾಸಮಿತಿ**

**ಭಾರತ ವಿದ್ಯಾರ್ಥಿ ಫೆಡರೇಷನ್**

**ನೆರವು**

**ಶ್ರೀಮತಿ ಮಂಜುಳ ಆದಿಕೇಶವ**
ಅಧ್ಯಕ್ಷರು
ಪುರಸಭಾಕಾರ್ಯಾಲಯ
ಆನೇಕಲ್ - 562 106

ಮಾನ್ಯ ಜಿಲ್ಲಾಧಿಕಾರಿಗಳಿಗೆ,

ಈ ದಿನ ನಾನೊಂದು ನಿಮಗೆ ಈ ಪತ್ರವನ್ನು ಬರೆದಿಡುತ್ತಿದ್ದೇನೆ. ನನ್ನ ಸಾವಿಗೆ ಕಾರಣ MLA ಆಗಿರುವ ಎ. ನಾರಾಯಣಸ್ವಾಮಿ ಮತ್ತು ಸದಸ್ಯರಾದ ರವಿ, ರಾಜಪ್ಪ ಸಿ. ಬಾಬು, ಶಂಕರ ಕುಮಾರ್ ಮತ್ತು ಉಪಾಧ್ಯಕ್ಷರಾದ ಡಿ. ವೆಂಕಟೇಶ್ ಇವರೇ ಕಾರಣ. ಇವರು ಇಂದು ನನಗೆ ಮಾಡಿದ ಅವಮಾನವನ್ನು ತಾಳಲಾರದೆ ನಾನು 'ಆತ್ಮಾಹತ್ಯೆ ಮಾಡಿಕೊಳ್ಳುತ್ತಿದ್ದೇನೆ. ಮಾನ್ಯ ಜಿಲ್ಲಾಧಿಕಾರಿಗಳಲ್ಲಿ ನಾನು ವಿನಂತಿಸಿಕೊಳ್ಳುವುದೇನೆಂದರೆ ಇವರಿಗೆ ನೀವು ಕೊಡಿಸುವ ಶಿಕ್ಷೆ ಮತ್ತೆ ಯಾವ ಹೆಣ್ಣನ್ನೂ ಇವರು ಈ ರೀತಿ ಅವಮಾನ ಮಾಡಬಾರದು.

ಅಧ್ಯಕ್ಷಳಾಗಿ ನಾನು ನಿಮ್ಮಲ್ಲಿ ಪ್ರಾರ್ಥಿಸಿಕೊಳ್ಳುವುದೇನೆಂದರೆ ಇವರಿಗೆ ನೀವು ಕೊಡಿಸುವ ಶಿಕ್ಷೆ ಸಾಮಾನ್ಯವಾಗಿರಬಾರದು. ಒಂದು ಹೆಣ್ಣನ್ನು ಅವಮಾನಪಡಿಸಿದ್ದಾಗ ಅದರಲ್ಲೂ ಆನೇಕಲ್ ಪ್ರಥಮ ಪ್ರಜೆಯಾದ ನನಗೆ ಅವಮಾನ ಮಾಡಿರುವುದು ಸರಿಯಲ್ಲ. ಇವರು ಬದುಕಿರುವವರೆಗೂ ಆ ಶಿಕ್ಷೆಯನ್ನು ಮರೆಯಬಾರದು ಮತ್ತೆ ಯಾವ ಹೆಣ್ಣಿಗೂ ಈ ರೀತಿ ಅಪಮಾನ ಮಾಡಬಾರದು. ಮಾನ್ಯ ಜಿಲ್ಲಾಧಿಕಾರಿಗಳಿಗೆ ನನ್ನ ಕೊನೆಯ ವಂದನೆಗಳು

ಇಂತಿ ಅವಮಾನಿತಳಾದ
**ಮಂಜುಳ ಆದಿಕೇಶವ**
5-11-03

# 'ಮಣ್ಣಿನ ಮಕ್ಕಳು' ಮಣ್ಣಾದಾಗ...

- ನೇಮಿಚಂದ್ರ

ಮಂಡ್ಯದ ಬಳಿಯ ಉಮ್ಮಡಹಳ್ಳಿಯಲ್ಲಿ ರೈತ ಮಹಿಳೆಯೊಬ್ಬಳು ಆತ್ಮಹತ್ಯೆ ಮಾಡಿಕೊಂಡ ಸುದ್ದಿ ಬಂದಿತ್ತು. ಕರ್ನಾಟಕದ ಮೂಲೆ ಮೂಲೆಗಳಲ್ಲಿ ರೈತರು ಜೀವ ಕಳೆದುಕೊಂಡ ಬಿಸಿ, ಬೆಂಗಳೂರಿನಲ್ಲಿ ತಣ್ಣಗೆ ಕುಳಿತ ನಮ್ಮನ್ನೂ ತಟ್ಟಿತ್ತು. ಮೊನ್ನೆ ಗುರುವಾರ, ಕುಸುಮಾರೊಡನೆ ಮಂಡ್ಯಕ್ಕೆ ಹೋದೆ. ಪ್ರೊ. ಕೇಶವಮೂರ್ತಿ ಮತ್ತು 'ಸ್ಪಂದನ' ಸಂಸ್ಥೆಯ ಸುನಂದ ನಮ್ಮನ್ನು ಉಮ್ಮಡಹಳ್ಳಿಗೆ ಕರೆದೊಯ್ದರು.

ಒಂದು ಮನೆಯ ಮುಂದೆ ನಿಲ್ಲಿಸಿ 'ಇದೇ ಮನೆ ಪುಟ್ಟತಾಯಮ್ಮ ನೇಣು ಹಾಕಿಕೊಂಡದ್ದು' ತೋರಿಸಿದರು. ಒಂದು ಕಾಲಕ್ಕೆ ಬದುಕಿ ಬಾಳಿದ ಸ್ಥಿತಿವಂತರ ಮನೆಯಾಗಿ ಕಂಡಿತು. ಗೋಡೆಯ ಮೇಲೆ ಕಟ್ಟು ಹಾಕಿಸಿದ್ದ ಪುಟ್ಟತಾಯಮ್ಮನ ಕೊರಳಿನಲ್ಲಿ ಮೂರೆಳೆ ಚಿನ್ನದ ಚೈನು, ಕಿವಿತುಂಬಾ ಅಗಲ ಓಲೆ, ಕೆನ್ನೆ ಸರಪಳಿ.

ಮನೆಯಲ್ಲಿ ಇದ್ದದ್ದು ಪುಟ್ಟತಾಯಮ್ಮನ ಸೊಸೆ ಮಂಗಳ. ಮೈಮೇಲೆ ಚೂರು ಚಿನ್ನ ಕಾಣದ, ಕತ್ತಿನ ಮೂಳೆಗಳು ಎದ್ದು ಕಂಡ, ಎಳೆಯ ಹುಡುಗಿ ಮಂಗಳ. ನಾವು ಜಗಲಿ ಮೇಲೆ ಕುಳಿತಂತೆ. ಸುತ್ತಮುತ್ತಲಿನಿಂದ ಐದಾರು ಗಂಡಸರು, ನಾಲ್ಕೈದು ಹೆಂಗಸರು ಬಂದು ಜೊತೆಗೂಡಿದರು.

'ಆದದ್ದಾರೂ ಏನಮ್ಮ?' ಕೇಳಿದೆವು.

ಈ ಮನೆಗೆ ಜವರಾಯ ಪದೇ ಪದೇ ಬಂದು ಹೋಗಿದ್ದ. ಮಾವನವರು ತೀರಿಕೊಂಡು ಸಾಕಷ್ಟು ವರ್ಷಗಳಾಗಿತ್ತು. ಪುಟ್ಟತಾಯಮ್ಮನಿಗೆ ಮೂರು ಜನ ಗಂಡು ಮಕ್ಕಳು. ಹೆಣ್ಣು ಮಕ್ಕಳನ್ನು ಮದುವೆ ಮಾಡಿಕೊಟ್ಟಿದ್ದರು. ಮಗ ಸೋಮನಿಗೆ ಹೃದಯ ರೋಗ ಇರುವುದು ಪತ್ತೆಯಾದಾಗ, ತನ್ನ ಸಂಸಾರಕ್ಕೆ ತನ್ನಿಂದ ಬಹಳ ಖರ್ಚಾಗುತ್ತದೆ ಎಂದು ಆತ ನೇಣು ಹಾಕಿಕೊಂಡಿದ್ದ. ಅತ್ತೆ ಪುಟ್ಟತಾಯಮ್ಮ ಬಲು ಗಟ್ಟಿ ಹೆಂಗಸರು. ದುಡಿಮೆಗೆ ಹೆದರಿದ ಹೆಣ್ಣಲ್ಲ. ಮಳೆ, ನಾಲೆ ನೀರು, ವ್ಯವಸಾಯವನ್ನೇ ನಂಬಿ ಬದುಕಿದ ಬದುಕು ಕಳೆದ ವರ್ಷಗಳಲ್ಲಿ ಬಡತನದ ಅಂಚಿಗೆ ನೂಕಲ್ಪಟ್ಟಿತ್ತು. ಸೊಸೈಟಿಯಿಂದ 25,000 ರೂಪಾಯಿ ಸಾಲ ಇತ್ತು. 'ಫೈನಾನ್ಸ್'ಗಳಿಂದ ತೆಗೆದುಕೊಂಡ 40,000 ರೂಪಾಯಿ ಸಾಲ. ಕೈಸಾಲ 40,000ಕ್ಕೆ ತಿಂಗಳಿಗೆ ಶೇಖಡಾ ಐದೋ, ಹತ್ತೋ ಬಡ್ಡಿ. ಸೊಸೈಟಿಯಿಂದ ನೋಟಿಸ್ ಬಂದಿತ್ತು. ಒಂದೂವರೆ ಎಕರೆ ಇದ್ದ ಗದ್ದೆಗೆ ಕಬ್ಬು ಹಾಕಿದ್ದರು. ಬೆಳೆ ಬರುವುದೆಂಬ ಧೈರ್ಯ. ಒಂದೂವರೆ ಎಕರೆ ಗದ್ದೆಯಲ್ಲಿ 50-60 ಟನ್ ಕಬ್ಬು ಬೆಳೆಯಬಹುದು. ಕಬ್ಬು 'ಮರಿಕಟ್ಟುವ' ತನಕ ಬೆಳೆದು ನಿಂತಿತ್ತು. ನಾಲೆಯಲ್ಲಿ ನೀರಿಲ್ಲ, ಮಳೆ ಬರುತ್ತೆ ಎಂದು ದಿನವೂ ಕಾದದ್ದಾಯ್ತು. ಜೂನ್ ತಿಂಗಳು, ಮಗ ಮಹೇಶ್ ಗದ್ದೆಯ ಕಡೆಗೆ ಹೋದ. ಬಾಡಿದ ಬೆಳೆಯನ್ನೇ ನೋಡುತ್ತಾ ನಿಂತ. ಮತ್ತೆ ಗೊತ್ತಾದಾಗ, ಗದ್ದೆಯ ಬಳಿ ಸಣ್ಣ ಮರವೊಂದಕ್ಕೆ ನೇಣು ಹಾಕಿಕೊಂಡಿದ್ದ. ಪುಟ್ಟತಾಯಮ್ಮನದು ನಿಜಕ್ಕೂ ಗಟ್ಟಿ ಜೀವ, 'ಮಳೆ ಬರುವುದೆಂಬ' ನಿರೀಕ್ಷೆಯಲ್ಲಿ ಕಾದೇ ಕಾದಳು. ಇದು ಇದೊಂದು ವರ್ಷದ ಗೋಳಲ್ಲ, ಕಾವೇರಿ ಅಚ್ಚುಕಟ್ಟಿನ ಜಾಗಕ್ಕೆ ಮೂರು ವರ್ಷದಿಂದ ಸರಿಯಾಗಿ ನೀರು ಸರಬರಾಜು ಆಗಿರಲಿಲ್ಲ. ವಿಸಿ ನಾಲೆಯಲ್ಲೂ ನೀರಿಲ್ಲ. ಬಾವಿ ಕೊಳ ಕೆರೆ ಗದ್ದೆ ಎಲ್ಲಾ ಬತ್ತಿ ಹೋಗಿತ್ತು. ಆಗಸ್ಟ್ ಕೊನೆಯಾದರೂ ಮಳೆ ಇಲ್ಲ. ಕಬ್ಬು ಒಣಗಿ ನಿಂತಿತ್ತು. ಅಂದು ಬೆಳಗ್ಗೆ ಎದ್ದ ಅತ್ತೆ ಒಂದು ಮಾತೂ ಆಡಲಿಲ್ಲ. 'ಬಾತ್ ಅನ್ನ'ಕ್ಕೆ ಒಗ್ಗರಣೆ ಹಾಕಲು ಬದನೇಕಾಯಿ ಹೆಚ್ಚಿಕೊಟ್ಟಾಗಲೂ ಒಂದು ಮಾತೂ ಇಲ್ಲ. ಏಳೂವರೆ ಗಂಟೆಗೆ ಕೋಣೆಗೆ ಹೋದವಳು, ನೇಣು ಹಾಕಿಕೊಂಡಳು.

ಜವರಾಯ ಬಂದು ಹೋದ ಮೇಲೆ ಮಳೆರಾಯ ಬೋರಿಟ್ಟು ಸುರಿದ. ಪರಿಹಾರವಾಗಿ ಒಂದು ಲಕ್ಷ ಬಂದಿತ್ತು. 65ಸಾವಿರ ಸೊಸೈಟಿ ಸಾಲ ಮತ್ತು ಬಡ್ಡಿಗೆ ಹೋಯಿತು. 20 ಸಾವಿರ ಅಂತ್ಯಕ್ರಿಯೆಗೆ. 20,000 ಖರ್ಚು ಮಾಡ್ತಾರೇನಮ್ಮ? ಆಕೆ ಸತ್ತಿದ್ದೇ ಸಾಲ ಮಾಡಿ. ಸತ್ತವರ ತಿಥಿಗೆ ಇಷ್ಟು ಖರ್ಚು ಮಾಡೋದೆ.' ನಾವೆಲ್ಲ ಆಕೆಯ ಮೇಲೆ ಹಾರಿ ಬಿದ್ದು ಕೇಳಿದೆವು. 'ಬದುಕಿ ಬಾಳಿದ ದೊಡ್ಡ ಜೀವ, ಹಳ್ಳಿಯಲ್ಲಿ ಎಲ್ಲಾ ಸರಿಯಾಗಿ ಮಾಡಲಿಲ್ಲದಿದ್ದರೆ ಆಗೋಲ್ಲ...' ಎನ್ನುತ್ತಿದ್ದಂತೆ. ಸುನಂದ ಅವರು, ಬಗಲಿನ ಮದ್ದೂರು ತಾಲೂಕಿನ ಹಲಗೆರೆಪುರದಲ್ಲಿ ಸತ್ತ ರೈತನ ಮನೆಯವರು 35,000 ರೂಪಾಯಿ ಖರ್ಚು ಮಾಡಿ, ಕುರಿಕೊಯ್ದು ತಿಥಿ ಮಾಡಿದ್ದು ಹೇಳಿದರು. ಇಂತಹ ಸಾಮಾಜಿಕ ಒತ್ತಡಗಳನ್ನು ಹೇಗೆ ತಡೆಯುವುದು? ಸರಳ ವಿವಾಹ, ಸರಳ ತಿಥಿ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸದೆ ಬದುಕು ಸುಧಾರಿಸದು.

ಅಲ್ಲಿ ಕುಳಿತ ಐದಾರು ಮಂದಿ ಗಂಡಸರನ್ನು ಕೇಳಿದೆ - 'ಅಲ್ಲ ಹಿಂದೆಯೂ ಬರಬಂದಿತ್ತು. ಹೀಗೆ ಬಡತನ, ಆತ್ಮಹತ್ಯೆ ಕಂಡಿರಲಿಲ್ಲ. ಅದು ಏನು ಬದಲಾಗಿದೆ ಈಗ...?'

ಆ ಗಂಡಸರೇ ಹೇಳಿದರು -

'ವ್ಯವಸಾಯ ಮಾಡ್ದೇ ಸುಮ್ಮನೆ ಇದ್ರೆ ಲಾಭ ನೋಡಿ. ಬೆಳೆ ಬೆಳೆಯೋಕೆ ನೀರಿಲ್ಲ ಪಂಪ್ ನೀರು ಹೊಡೆಯೋಕೆ ಕರೆಂಟ್ ಇಲ್ಲ. ಬೆಳೆ ಬೆಳೆದರೂ ಸರಿಯಾದ ಬೆಲೆ ಸಿಗೋ ಗ್ಯಾರಂಟಿ ಇಲ್ಲ. ಬೆಲೆ ನಿರ್ಣಯದ ಹಿಂದೆ ಬರೀ ರಾಜಕೀಯ. ಮನೇಲಿ ಉಣ್ಣೋಕೆ ನಾಕು ಜನ ಗಂಡಸರಿದ್ದರೆ, ದುಡಿಯೋರು ಒಬ್ಬರಿರೋಲ್ಲ...'

'ಅದ್ಯಾಕೆ?' ಕೇಳಿದೆ.

'ಹಿಂದೆಲ್ಲ ಎಲ್ಲರೂ ಮೈಬಗ್ಗಿಸಿ ಗದ್ದೆಯಲ್ಲಿ ದುಡಿಯೋರು. ಈಗೆಲ್ಲ ದೊಡ್ ಚಡ್ಡಿ ಹಾಕಿಕೊಂಡು ಪೇಟೆ ತಿರುಗೋರೆ ಆದರು. ಜರ್ದಾ ಅಗಿಯೋದು. ಬೀಡಿ ಸೇದೋದು. ಅಂಗಡಿ ಅಂಗಡೀನಲ್ಲೂ ಸಾರಾಯಿ ಪ್ಯಾಕೆಟ್ ಸಿಗುತ್ತೆ ಕುಡಿಯೋದು. ಮಂಡ್ಯಕ್ಕೋಗಿ ಇಡೀ ದಿನ ಆನ್‌ಲೈನ್ ಲಾಟರಿ ಆಡೋದು... ದುಡಿಯೋದೆಲ್ಲ ಬರೀ ಹೆಂಗಸರೆ' ಹೀಗೆ ಹೇಳಿದವರು ಗಂಡಸರು!

'ಸರಾಯಿ ಪ್ಯಾಕೆಟ್‌ಗೆ ಅಷ್ಟು ದುಡ್ಡು, ಎಲ್ಲಿ ಸಿಗುತ್ತೆ?' ವಿಚಾರಿಸಿಕೊಂಡೆವು.

'ಹತ್ತು ರೂಪಾಯಿ ಒಂದು ಪ್ಯಾಕೆಟ್‌ಗೆ. ಆದರೆ ಒಂದಕ್ಕೇ ಕಿಕ್ ಬರೋಲ್ಲ. ಡಬ್ಬಿ ಅಂಗಡೀಲೂ ಸಿಗುತ್ತೆ...' ವಿವರವಾಗಿ ವಿವರಿಸಿದರು

CPMG/KA/BG-8/2003-05 **RNI No. 45577/88**

***Posted at Basavanagudi P.O. On the 25th of every Month***

ಅನುಭವಸ್ಥರು! 'ಈ ಲಾಟರಿ ಬೆಳಗ್ಗೆ 6 ಗಂಟೆಗೆ ಶುರುವಾಗುತ್ತೆ ರಾತ್ರಿ 12ರವರೆಗೂ ನಡೆಯುತ್ತೆ. ಒಂದಂಕಿ, ಎರಡಂಕಿ, ಮೂರಂಕಿ ಯಾವುದು ಬೇಕಾದ್ರೂ ಆಡಬಹುದು. ಒಂದಾಟಕ್ಕೆ ಹತ್ತು ರೂಪಾಯಿ...' ಮತ್ತೂ ವಿವರಗಳು.

ಜರ್ದಾ, ಸಾರಾಯಿ, ಆನ್‌ಲೈನ್ ಲಾಟರಿ - ಚಟವಾಗಿದೆ. ಕೊಳ್ಳುಬಾಕ ಸಂಸ್ಕೃತಿಯ ಕೊಡುಗೆ, ಶ್ರಮ ಹಾಕದೆ ತಟ್ಟನೆ ಶ್ರೀಮಂತರಾಗಿಬಿಡುವ ಬಯಕೆ, ಹತ್ತಿರದ ಬೆಂಗಳೂರು ಮೈಸೂರು ಪೇಟೆಗಳ ವೈಭವ, ಆಕರ್ಷಣೆ - ಇವೆಲ್ಲವೂ ಹಳ್ಳಿಯ ಗಂಡಸರ ಬದುಕನ್ನೇ ಬದಲಿಸಿಬಿಟ್ಟಿವೆ. ವಾರಕ್ಕೆರಡು ಬಾರಿಯ ಕುದುರೆ ರೇಸಿನ ಚಟಕ್ಕೆ ಬಿದ್ದು ಮನೆ ಮುಳುಗಿಸಿದ ಅತಿ ಹತ್ತಿರದ ಅನುಭವವನ್ನು ಕಣ್ಣಾರೆ ಕಂಡ ನನಗೆ, ಬೆಳಗ್ಗಿನಿಂದ ಮಧ್ಯರಾತ್ರಿಯವರೆಗೆ ಜೂಜುಕಟ್ಟೆ ತೆಗೆದಿದ್ದರೆ ಏನಾಗಬಹುದೆಂದು ಊಹಿಸುವುದೇನೂ ಕಷ್ಟವಾಗಲಿಲ್ಲ. ಒಂದಿಷ್ಟು ಓದಿದ ಹಳ್ಳಿ ಹುಡುಗರ ಬಾಯಲ್ಲಿ ಈಗ ಕೇಳಿ ಬರುವ ಮಾತು 'ಮಜ ಮಾಡಬೇಕು'. ಮಣ್ಣಿನ ಮಕ್ಕಳನ್ನು 'ಹೆಂಡ ಕುಡುಕ'ರನ್ನಾಗಿ, 'ಜೂಜುಕೋರ'ರನ್ನಾಗಿ ಮಾಡಿದ ಹೆಗ್ಗಳಿಕೆ ಸರಕಾರದ್ದು.

ಇಂಥಾ ಸ್ಥಿತಿಯಲ್ಲಿ ಮನೆ-ಹೊಲ ಎರಡರ ದುಡಿಮೆ, ಜವಾಬ್ದಾರಿ ಹೆಂಗಸರ ಮೇಲೆ ಬಿದ್ದಿದೆ.

ದೇಶಕ್ಕೆ ಬೆನ್ನೆಲುಬಾದ ರೈತ ಜೂಜುಕೋರನಾದರೆ, ಆ ದೇಶ ಉಳಿಯಲು ಸಾಧ್ಯವೆ? ಒಂದೆಡೆ ಒಂದು ವರ್ಗದ ಬಳಿ ಹೇರಳವಾಗಿ ಸಂಗ್ರಹವಾಗುತ್ತಿರುವ ಹಣ. ಆಕರ್ಷಕ ಮಾಲುಗಳು, ಪಟ್ಟಣದ ವೈಭವಗಳು, ಅಗತ್ಯವಿಲ್ಲದನ್ನು ಅಗತ್ಯವೆಂದು ಸಾರುವ ಕೊಳ್ಳುಬಾಕ ಸಂಸ್ಕೃತಿಯ ಜಾಹಿರಾತುಗಳು. ಇನ್ನೊಂದೆಡೆ ಮಳೆ ಮೇಲೆ ನಿರ್ಧರಿತ ಬದುಕು, ಅನಿಶ್ಚಿತ ಮಾರುಕಟ್ಟೆಯ ಬೆಲೆ, ದುಡಿವ ಗಂಡಸರು ಜೂಜುಕೋರರಾಗಿ, ಕುಡುಕರಾಗಿ ಬಿದ್ದಿರುವ ವಿಪರೀತ. ಹೀಗೇ ಮುಂದುವರೆದರೆ ಬಲು ಶೀಘ್ರದಲ್ಲಿಯೇ ವಿಪರೀತ ಶ್ರೀಮಂತರ ಒಂದು ವರ್ಗ. ಕಡು ಬಡವರ ಇನ್ನೊಂದು ವರ್ಗ ಸೃಷ್ಟಿಯಾಗಿ, ಈ ನೆಲದಲ್ಲಿ ಫ್ರೆಂಚ್ ಕ್ರಾಂತಿ ಪುನರಾವರ್ತಿಸುವುದರಲ್ಲಿ ಅನುಮಾನವಿಲ್ಲ.

ನಾವು ಇಂದು ಮಾಡಬೇಕಾದದ್ದು ಬಹಳಷ್ಟಿದೆ :

ಮೊದಲು ಡಬ್ಬಿ ಅಂಗಡಿಯಲ್ಲೂ ಸರಬರಾಜಾಗುವ ಸಾರಾಯಿ ಪ್ಯಾಕೆಟ್‌ಗಳ ಮಾರಾಟ ನಿಷೇಧಿಸಲು ಹೋರಾಡಬೇಕು. ಆನ್‌ಲೈನ್ ಲಾಟರಿ ನಿಲ್ಲಿಸಬೇಕು.

ಇದರಾಚೆಗೆ ಜಾಗೃತಿಯ ಕಾರ್ಯಕ್ರಮಗಳು ನಮ್ಮ ಹಳ್ಳಿ ಹಳ್ಳಿಗಳಲ್ಲಿ ನಡೆಯಬೇಕಿದೆ. 'ಕಡಮೆ ಶ್ರಮ, ತಟ್ಟನೆ ಶ್ರೀಮಂತರಾಗುವ' ಕೊಳ್ಳುಬಾಕ ಸಂಸ್ಕೃತಿಯ ಮೌಲ್ಯಗಳನ್ನು ತಮ್ಮ ಮಿತಿಯನ್ನು ಮಿರಿದ ಶೋಕಿಯ ಬದುಕನ್ನು ಮೋಹಿಸುತ್ತಿರುವ ಜನರಿಗೆ ಮತ್ತೊಮ್ಮೆ ಸರಳ ಬದುಕಿನ ಮೌಲ್ಯವನ್ನು 'ದುಡಿಮೆಯೇ ದೇವರೆಂಬ' ಮಂತ್ರವನ್ನು ತಲುಪಿಸಬೇಕಿದೆ. ಈ ಕಾರ್ಯ ಜನರಿಂದಲೇ ಆರಂಭವಾಗಬೇಕಿದೆ.

❑

"Achala" 108, Skyline Surabhi,
14 - P, Vidyapeeta Road,
BSK III Stage,
Bangalore - 560 085

To :

Smt/Sri